श्रीमदानन्दतीर्थभगवत्पादाचार्यविरचितं

# तैत्तिरीयोपनिषद्भाष्यम्

षट्टिप्पणीयुतम्



सम्पादकः पं. वेंकटेशाचार्य बि.आर्

प्रकाशनम् : विश्वमध्वमहापरिषत् उत्तरादिमठः

विश्वमध्वमहापरिषत् ग्रन्थमाला - 72

श्रीमदानन्दतीर्थभगवत्पादाचार्यविरचितम्

# तैत्तिरीयोपनिषद्भाष्यम्

(षट्टिप्पणीयुतम्)




सम्पादकः

**पं. बि.आर्.वेंकटेशाचार्यः**

...प्रकाशनम्...

**श्रीमज्जगद्गुरुश्रीमन्मध्वाचार्यमूलमहासंस्थान**

**उत्तरादिमठः**

**विश्वमध्वमहापरिषत्, बसवनगुडि, बेङ्गळूरु - ४**

**TAITTIREEYOPANISHAD BHASHYAM**

**A WORK OF SRI MADHWACHARYA**

With six commentaries written by Sri Vyasateertha, Sri Vadiraja Teertha, Sri Shrinivasa Teertha, Sri Raghavendra Teertha, Sri Varada Teertha and Kashi Timmannacharya

**Edited by - Pt. Venkateshacharya. B.R.**

Copies : 1000

First Edition : April 2010

No.of Pages : 58+446=504



**Price : 200**

Copies can be had from :

1. **Jayateertha Vidyapeetha**
Sri Uttaradi Math
Shankarapurm, 5th Cross
Basavanagudi, Bangalore - 04. Phone : 22426203

2. **Vishva Madhwa Mahaparishat**
#11 2nd Floor Uttaradimath Building.
UttaradiMath Road, Shankarpuram,
Basavanagudi BANGALORE - 4
Phone : 080 26603692

ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ವಿಭಾಗ

ಮುಖಪುಟ ವಿನ್ಯಾಸ : ಗೋಪಾಲಕೃಷ್ಣ ದಾವಣಗೆರೆ

Printed by :
VAGARTHA, Bangalore - 19



ಪರಮಪೂಜ್ಯ ಗುರುಗಳ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕವಾಗಿ
ಸಮರ್ಪಿಸಿದ ಕೃತಿಕುಸುಮ



ಪರಮಪೂಜ್ಯ ಗುರುಗಳ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕವಾಗಿ
ಸಮರ್ಪಿಸಿದ ಕೃತಿಕುಸುಮ

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ

## ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ

# ... ಅನುಗ್ರಹ ಸಂದೇಶ ...

ಸಾಧಕನಿಗೆ ಉಪಾಸನೆಗಾಗಿ ಭಗವಂತನ ರೂಪಗಳನ್ನು ಬಣ್ಣಿಸಲು ಹೊರಟ ಉಪನಿಷತ್ತು ತೈತ್ತಿರೀಯ ಉಪನಿಷತ್ತು. ಸಾಕ್ಷಾತ್ ನಾರಾಯಣ, ಬ್ರಹ್ಮದೇವರು, ವರುಣ, ಭೃಗು ಈ ಕ್ರಮದಲ್ಲಿ ಬಂದದ್ದು ಈ ಉಪನಿಷತ್ತು. ಲೋಕ-ಜ್ಯೋತಿ-ವಿದ್ಯಾ-ಪ್ರಜಾ-ಆತ್ಮ ಎಂಬ ಅಧಿಷ್ಠಾನಗಳಲ್ಲಿಯ ನಾರಾಯಣಾದಿರೂಪಗಳನ್ನು ಪ್ರತಿಪಾದಿಸುತ್ತಾ ಅಧಿಕಾರಿಯಾದ ಜೀವನು ದೇವರಲ್ಲಿ ಮಾಡಬೇಕಾದ ಸುಂದರಪ್ರಾರ್ಥನೆಯನ್ನು ಯಶ್ಛಂದಸಾಮೃಷಭೋ ವಿಶ್ವರೂಪಃ ಇತ್ಯಾದಿ ಮಂತ್ರಗಳಿಂದ ತಿಳಿಸಿಕೊಡುತ್ತದೆ. ದೇವರಿಗೆ ಬೇಡಬೇಕು ಎನ್ನುವುದು ಗೊತ್ತು. ಏನು ಬೇಡಬೇಕು ಎನ್ನುವದು ಯಾರಿಗೂ ಗೊತ್ತಿಲ್ಲ. 'ಬೇಡುವೆನು ನಾನೊಂದು ಬೇಡತಕ್ಕದ್ದೊಂದು' ಎಂದು ದಾಸರು ಇದನ್ನೇ ತಿಳಿಸಿದ್ದಾರೆ. ಉಪನಿಷತ್ತು ತಿಳಿಸುವ ಪ್ರಾರ್ಥನೆ ಹೀಗಿದೆ-

'ಓ ವೇದೇಶ ! ವೇದವೇದ್ಯ !

◆ ವೇದ ತಿಳಿಯುವ ಪ್ರಜ್ಞೆಯನ್ನು ನೀಡು.

◆ ವೇದಾರ್ಥಜ್ಞಾನವು ನನ್ನಲ್ಲಿ ಸ್ಥಿರವಾಗಿರಲಿ.

◆ ಈ ಜ್ಞಾನಪರಂಪರೆ ನನ್ನಿಂದ ಹೀಗೆಯೇ ಶಿಷ್ಯಪ್ರಶಿಷ್ಯಾದಿಗಳಲ್ಲಿ ಮುಂದುವರಿಯಲಿ.

◆ ನಾಲಿಗೆಯು ನಿನ್ನನ್ನೇ ಕೊಂಡಾಡಲಿ.

◆ ಕಿವಿಗಳು ನಿನ್ನ ಮಹಿಮೆಯನ್ನೇ ಕೇಳಲಿ.

◆ ಕೇಳಿದ ಮಹಿಮೆ ಮನಸ್ಸಿನಲ್ಲಿ ಸ್ಥಿರವಾಗಿರಲಿ.

◆ ಮೋಕ್ಷೋಪಯೋಗಿಯಾದ, ಸಾಧನೆಗೆ ಅನುಕೂಲವಾದ ಅನ್ನ-ಪಾನ-ವಸ್ತ್ರ -ಪಶು ಮೊದಲಾದ ಸಮೃದ್ಧಿಯನ್ನು ನೀಡುವ ಮಹಾಲಕ್ಷ್ಮೀದೇವಿಯ ಕೃಪೆ ನನ್ನ ಮೇಲಾಗುವಂತೆ ಮಾಡು.

◆ ವಿಷ್ಣುಭಕ್ತರಾದ, ವಿರಕ್ತರಾದ, ಉತ್ತಮರಾದ ವಿವಿಧ ವಿದ್ಯಾರ್ಥಿಗಳು ನನ್ನ ಹತ್ತಿರ ಧಾವಿಸಿ ಬರಲಿ. ಅದಕ್ಕೆ ಉಪಯುಕ್ತವಾದ ಸಾತ್ವಿಕ ಕೀರ್ತಿಯು ನನಗಿರಲಿ.

◆ ನನ್ನ ಮನಸ್ಸು ಯಾವಾಗಲೂ ನಿನ್ನಲ್ಲಿರಲಿ.

◆ ನೀನು ನನ್ನಲ್ಲಿ ಸನ್ನಿಹಿತನಾಗಿ ಇರು.

ಹೀಗೆ ಭಗವಂತನಲ್ಲಿ ಸುಂದರವಾಗಿ ಪ್ರಾರ್ಥನೆ ಮಾಡುವ ಕ್ರಮವನ್ನು ನಮಗೆ ತಿಳಿಸಿಕೊಡುತ್ತದೆ.

ಅನೇಕ ತತ್ತ್ವಗಳನ್ನು ತಿಳಿಸುವ ಈ ತೈತ್ತಿರೀಯ ಉಪನಿಷತ್ತಿನ ನಿಜವಾದ ಭಾವವನ್ನು ಸಪ್ರಮಾಣವಾಗಿ ಜಗತ್ತಿಗೆ ತಿಳಿಸಿ ಅನಂತ ಉಪಕಾರ ಮಾಡಿದ ಮಹಾನುಭಾವರು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು. ನಮ್ಮಂತವರಿಗೆ ಅವರ ಭಾಷ್ಯದ ಭಾವವನ್ನು ತಿಳಿಸುವದಕ್ಕೆ ಪರಮಾನುಗ್ರಹ ಮಾಡಿ ಅನೇಕ ಮಹಾನುಭಾವರಾದ ಜ್ಞಾನಿಗಳು ವ್ಯಾಖ್ಯಾನಗಳನ್ನು ರಚಿಸಿದ್ದಾರೆ.

ಸಜ್ಜನರಿಗೆ ಇದರ ಲಾಭವಾಗಲಿ ಎಂಬ ಉದ್ದೇಶ್ಯದಿಂದ ಈ ವ್ಯಾಖ್ಯಾನಷಟ್ಕದಿಂದ ಸಹಿತವಾದ ತೈತ್ತಿರೀಯೋಪನಿಷತ್ತಿನ ಪ್ರಕಾಶನವನ್ನು ವಿಶ್ವಮಧ್ವಮಹಾಪರಿಷತ್ತಿನಿಂದ ಮಾಡಲಾಗುತ್ತಿದೆ. ಈ ಗ್ರಂಥದ ಸಂಶೋಧನ ಕಾರ್ಯವನ್ನು ನಮ್ಮ ಪ್ರಿಯಶಿಷ್ಯನಾದ ಪಂ. ವೆಂಕಟೇಶಾಚಾರ್ಯನು ಬಹಳ ಪರಿಶ್ರಮಪೂರ್ವಕವಾಗಿ, ವಿಶಿಷ್ಟವಾದ ಶ್ರದ್ಧೆಯಿಂದ ಮಾಡಿದ್ದಾನೆ. ಹಸ್ತಪ್ರತಿಗಳಲ್ಲಿರುವ ಕೆಲವು ವ್ಯಾಖ್ಯಾನಗಳು ಬಹಳ ಅಸ್ಪಷ್ಟವಾಗಿಯೂ ಮತ್ತು ಜೀರ್ಣಾವಸ್ಥೆಯಲ್ಲಿದ್ದರೂ ಅದನ್ನು ಶೋಧಿಸಿ ಈ ಕಾರ್ಯವನ್ನು ಪೂರ್ಣಮಾಡಿದ್ದು ಪ್ರಶಂಸನೀಯವಾಗಿದೆ. ಈಗಾಗಲೇ ತಲವಕಾರಮೊದಲಾದ ಅನೇಕ ಕೃತಿಗಳನ್ನು ಶೋಧಿಸಿ ಸಂಪಾದಿಸಿದ್ದಾನೆ. ಇದೇ ರೀತಿ ಇನ್ನೂ ಅನೇಕ ಗ್ರಂಥಗಳ ಶೋಧನೆ ಹಾಗು ಸಂಪಾದನೆ ಕಾರ್ಯಗಳನ್ನು ಇವನಿಂದ ಮಾಡಿಸಿ ಇವನಿಗೆ ಜ್ಞಾನ ಭಕ್ತಿ ವೈರಾಗ್ಯಗಳನ್ನು ಕೊಟ್ಟು ಅನುಗ್ರಹಿಸಲಿ ಎಂದು ನಮ್ಮ ಉಪಾಸ್ಯಮೂರ್ತಿ ಶ್ರೀಮನ್ಮೂಲರಾಮದಿಗ್ವಿಜಯ ರಾಮವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಈ ಪುಸ್ತಕದ ಪ್ರಕಾಶನಕ್ಕೆ ವಿಶೇಷ ಸೇವೆಯನ್ನು ಮಾಡಿದ ಮುಂಬಯಿಯ ಶ್ರೀವಿಜಯ ಬಸರಕೋಡ ಇವರಿಗೂ ಭಗವಂತ ಜ್ಞಾನ ಭಕ್ತಿ ವೈರಾಗ್ಯಗಳನ್ನು ಕೊಟ್ಟು ಅನುಗ್ರಹಿಸಲಿ ಎಂದು ನಮ್ಮ ಉಪಾಸ್ಯಮೂರ್ತಿ ಶ್ರೀಮನ್ಮೂಲರಾಮದಿಗ್ವಿಜಯ ರಾಮವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು

**ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರು**

ಉತ್ತರಾದಿಮಠ

# ಆಶೀರ್ವಚನ

ಉಪನಿಷತ್ತುಗಳು ಭಗವಂತನ ಪಾರಮ್ಯವನ್ನೇ ವಿಶೇಷವಾಗಿ ಪ್ರತಿಪಾದಿಸಲು ಹೊರಟ ಅಪೌರುಷೇಯ ಶಬ್ದರಾಶಿ. ಇಲ್ಲಿ ಭಗವಂತನ ಹೊರತಾಗಿ ಬೇರೆ ಯಾವುದೂ ಪ್ರತಿಪಾದಿತವಾಗಿರುವದಿಲ್ಲ. ಪರಮಪುರುಷಾರ್ಥವಾದ ಮೋಕ್ಷವನ್ನು ಪರಮಲಕ್ಷ್ಯ-ವನ್ನಾಗಿಟ್ಟುಕೊಂಡು ಹೊರಟಿರುವ ಉಪನಿಷತ್ತುಗಳಲ್ಲಿ ಭಗವಂತನ ಗುಣಗಾನವಷ್ಟೇ ಉಚಿತವೂ ಕೂಡ.

ಇಂತಹ ಭಗವಂತನ ಸಾರ್ವಭೌಮತೆಯ ಸಮರ್ಥನೆಯನ್ನೊಳಗೊಂಡ ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಇತರ ದೇವತೆಗಳ ಮಹಿಮೆಯೂ ಕೇಳಿ ಬರುತ್ತದೆ. ಈ ವಿಧವಾದ ಇತರ ದೇವತೆಗಳ ಪ್ರಸ್ತಾವನೆಯು ಭಗವಂತನ ಪಾರಮ್ಯವನ್ನು ತಿಳಿಸಲೆಂದೇ ಇದ್ದದ್ದು.

**ಸೂತ್ರಾತ್ಮಾ ತೂಚ್ಯತೇ ವಿಷ್ಣೋಸ್ತದ್ವಿಶಿಷ್ಟತ್ವವಿತ್ತಯೇ ।**

ಈ ನಿಟ್ಟಿನಲ್ಲಿ ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಬರುವ ಮುಖ್ಯಪ್ರಾಣದೇವರ ಮಹಿಮೆಯೂ ಕೂಡ ಭಗವಂತನ ಪಾರಮ್ಯಕ್ಕೆ ಪೂರಕವಾಗಿ ಪ್ರತಿಪಾದಿತವಾಗಿದೆ.

ಪ್ರಕೃತ ತೈತ್ತಿರಿಯೋಪನಿಷತ್ತಿನ ಶಿಕ್ಷಾವಲ್ಲಿಯ ಶಾಂತಿಮಂತ್ರದಲ್ಲಿ 'ನಮಸ್ತೇ ವಾಯೋ' 'ತ್ವಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ' ಎಂದು ವಾಯುದೇವರನ್ನು ಪರಮಾತ್ಮನ ಮುಖ್ಯಪ್ರತಿಮೆಯೆಂದು ಪ್ರತಿಪಾದಿಸಲಾಗಿದೆ. ಮುಂದೆ ನಾಲ್ಕಾರು ಮಂತ್ರಗಳಲ್ಲಿ ಸಂಹಿತೆಗೆ ಸಂಬಂಧಿಸಿದ ಅಧಿಲೋಕಮೊದಲಾದ ಐದು ಪ್ರಕರಣಗಳಲ್ಲಿ ಮುಖ್ಯಪ್ರಾಣನು ತನ್ನ ಪ್ರಾಣಾದಿರೂಪಗಳಿಂದ ಅಭಿಮಾನಿಯಾಗಿರುವನು ಎಂದು ಹೇಳಲಾಗಿದೆ.

'ಭುವ ಇತಿ ವಾಯೌ' ಎನ್ನುವ ಶಿಕ್ಷಾವಲ್ಲಿಯ 13ನೇ ಮಂತ್ರದಲ್ಲಿ ಭುವ ಎನಿಸುವ ಪ್ರದ್ಯುಮ್ನನು ವಾಯುವಿನಲ್ಲಿ ಪ್ರತಿಷ್ಠಿತನಾಗಿದ್ದಾನೆ ಎಂದು ಹೇಳಲಾಗಿದೆ. 'ಪ್ರಾಣಾರಾಮಂ ಮನ ಆನಂದಂ' ಎಂಬ 14ನೇ ಮಂತ್ರದಲ್ಲಿ ವ್ಯಾಹೃತಿಪ್ರತಿಪಾದ್ಯ ವಾಸುದೇವನು ಮುಖ್ಯಪ್ರಾಣನಿಗೆ ವಿಶೇಷವಾಗಿ ಆನಂದನೀಡುವನೆಂದು ವರ್ಣಿಸಲಾಗಿದೆ.

ಭಗವಂತನ ಸೃಷ್ಟಿಯ ವೈಚಿತ್ರ್ಯವನ್ನು ವಿಶೇಷವಾಗಿ ವರ್ಣಿಸಲು ಹೊರಟದ್ದು ತೈತ್ತಿರೀಯದ ಬ್ರಹ್ಮವಲ್ಲಿ. ಈ ಬ್ರಹ್ಮವಲ್ಲಿಯ ಆರಂಭದಲ್ಲಿಯೇ ಭಗವಂತನ ಮಹಿಮೆಯು ಹೀಗೆ ಉಕ್ತವಾಗಿದೆ. ಭಗವಂತ ಮೊದಲು ಎಲ್ಲವನ್ನೂ ಸೃಷ್ಟಿಸಿದ. ತನ್ನಿಂದ ಸೃಷ್ಟವಾದ ಈ ಜಗತ್ತನ್ನು ಒಂದೊಂದು ರೂಪದಿಂದ ಪ್ರವೇಶಿಸಿದ. ಯಾವ ರೂಪಗಳಿಂದ ಜಗತ್ತಿಗೆ

ದುಃಖಮೊದಲಾದ ದೋಷಗಳನ್ನು ನೀಡಿದನೋ ಆ ರೂಪಗಳನ್ನು ಲಕ್ಷ್ಮೀ-ಪ್ರಾಣರಲ್ಲಿ ಪ್ರವೇಶಗೊಳಿಸಲಿಲ್ಲ. ಇದಕ್ಕೆ ವಿಪರೀತವಾಗಿ ಗುಣವಾಚಕವಾದ ಸತ್ಯಾದಿನಾಮಗಳಿಂದ ಲಕ್ಷ್ಮೀ-ಮುಖ್ಯಪ್ರಾಣರನ್ನು ಪ್ರವೇಶಿಸಿ ಆ ಅಧಿಷ್ಠಾನಗಳಿಗೆ ಒಂದು ವಿಶಿಷ್ಟಸ್ಥಾನವನ್ನು ಕಲ್ಪಿಸಿದ.

ಇನ್ನು ಇದೇ ಬ್ರಹ್ಮವಲ್ಲಿಯ 'ಭೀಷಾಸ್ಮಾದ್ವಾತಃ ಪವತೇ' ಎಂಬ ಮಂತ್ರದಲ್ಲಿಯೂ ಕೂಡ ಮುಖ್ಯಪ್ರಾಣದೇವರು ಭಗವಂತನ ಆಜ್ಞೆಗೆ ಭಯಪಟ್ಟು ಲೋಕದಲ್ಲಿ ಸಂಚರಿಸುತ್ತ ಜಗತ್ತನ್ನು ಪವಿತ್ರಗೊಳಿಸುತ್ತಾನೆ ಎಂದು ತಿಳಿಸಲಾಗಿದೆ.

ಕೊನೆಯದಾಗಿ ಭೃಗುವಲ್ಲಿಯಲ್ಲಿ ಮೂಡಿ ಬಂದ 'ಬಲಮಿತಿ ವಿದ್ಯುತಿ' ಎಂಬ ಮಂತ್ರವು ವಾಯುದೇವರಲ್ಲಿ ಭಗವಂತ ಬಲರೂಪನಾಗಿ ಬಲನಾಮಕನಾಗಿ ಇರುವನು. ಎಂದು ಹೇಳಲಾಗಿದೆ.

ಇಂತಹ ಭಗವಂತನ ಹಾಗೂ ಮುಖ್ಯಪ್ರಾಣದೇವರ ಮಹಿಮೆಯನ್ನು ಕೊಂಡಾಡುವ ತೈತ್ತಿರೀಯೋಪನಿಷತ್ತು ಆರು ವ್ಯಾಖ್ಯಾನಗಳನ್ನೊಳಗೊಂಡು ಮುದ್ರಣಗೊಳ್ಳುತ್ತಿದೆ. ಈ ಉಪನಿಷತ್ತನ್ನು ನಮ್ಮ ಶಿಷ್ಯನಾದ ಪಂ. ವೆಂಕಟೇಶಾಚಾರ್ಯನು ಸಂಶೋಧಿಸಿ, ಕನ್ನಡಭಾಷೆಯಲ್ಲಿ ಮಂತ್ರಗಳ ಭಾವಾನುವಾದನ್ನೂ ಮಾಡಿ ಚೆನ್ನಾಗಿ ಸಂಪಾದಿಸುವ ಮೂಲಕ ಶ್ರೀವೇದವ್ಯಾಸದೇವರ ಹಾಗು ಶ್ರೀಮದಾಚಾರ್ಯರ ಸೇವೆಯನ್ನು ಮಾಡಿರುತ್ತಾನೆ. ಅವನಿಗೆ ದೇವರು ಜ್ಞಾನಭಕ್ತಿವೈರಾಗ್ಯಗಳನ್ನು ಕೊಡಲಿ ಎಂದು ಪ್ರಾರ್ಥಿಸುತ್ತೇನೆ.

**ಪಂ.ರಂಗಾಚಾರ್ಯ ಗುತ್ತಲ್**<br>
ಕುಲಪತಿಗಳು<br>
ಜಯತೀರ್ಥವಿದ್ಯಾಪೀಠ

## ... ಈ ಕೃತಿಯ ಕುರಿತಾಗಿ ...

ಉಪನಿಷತ್ತುಗಳು ಪರಮಾತ್ಮನ ಯಥಾರ್ಥವಾದ ಸ್ವರೂಪವನ್ನು ತಿಳಿಸಲು ಹೊರಟಿವೆ. ಪಕೃತ ಭೃಗು-ವರುಣರ ಸಂವಾದ ರೂಪದಲ್ಲಿ ಪ್ರವೃತ್ತವಾದ ಈ ತೈತ್ತಿರೀಯೋಪನಿಷತ್ತು ಶುಕ್ಲಯಜುರ್ವೇದಶಾಖೆಗೆ ಸೇರುವಂತಹ ಮಂತ್ರಭಾಗವಾಗಿದೆ.

ಈ ಉಪನಿಷತ್ತಿಗೆ ವ್ಯಾಖ್ಯಾನಗಳು ಅನೇಕ. ಆದರೆ ಅಧ್ಯಯನ ಮಾಡುವ ಜಿಜ್ಞಾಸುಗಳಿಗೆ ಯಾವ ವ್ಯಾಖ್ಯಾನವನ್ನು ಅಧ್ಯಯನ ಮಾಡಿದರೆ ಭಗವಂತನ ಅಪರೋಕ್ಷಜ್ಞಾನವಾಗಿ ಮುಕ್ತಿಯು ದೊರೆಯುತ್ತದೆಯೋ ಆ ವಿಧವಾದ ವ್ಯಾಖ್ಯಾನವನ್ನು ನೀಡುವ ಪ್ರಯತ್ನವನ್ನು ಉಳಿದವ್ಯಾಖ್ಯಾನಕಾರರು ಮಾಡಿರುವದಿಲ್ಲ. ಅನ್ನುವದಕ್ಕೆ ಉಳಿದವರು ಮಾಡಿದ ವ್ಯಾಖ್ಯಾನಗಳನ್ನು ನೋಡಿ ತತ್ತ್ವಗಳನ್ನು ತಿಳಿದವರು ಭಗವಂತನ ಜ್ಞಾನವನ್ನು ತಿಳಿಯಲು ಸಮರ್ಥರಾಗುವದಿಲ್ಲ ಇದನ್ನು ಅರಿತ ಶ್ರೀಮದಾಚಾರ್ಯರು ಈ ಉಪನಿಷತ್ತಿಗೆ ಯಥಾರ್ಥವಾದ ವ್ಯಾಖ್ಯಾನವನ್ನು ಮಾಡಿ ಸಜ್ಜನರನ್ನು ಉದ್ಧಾರ ಮಾಡಿದ್ದಾರೆ.

ಗಂಭೀರವಾದ ಶ್ರೀಮದಾಚಾರ್ಯರ ಭಾಷ್ಯವನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಅಜ್ಞಾನಿಗಳಾದ ನಮಗೆ ಸರ್ವಥಾ ಇಲ್ಲ. ಆದ್ದರಿಂದ ಮಹಾನುಭಾವರಾದ ಅನೇಕ ಜ್ಞಾನಿಗಳು ಶ್ರೀಮದಾಚಾರ್ಯರ ಭಾವವನ್ನು ತಿಳಿಸುವ ಟೀಕಾ - ಟಿಪ್ಪಣಗಳನ್ನು ರಚಿಸಿಕೊಟ್ಟು ನಮಗೆ ಪರಮೋಪಕಾರ ಮಾಡಿದ್ದಾರೆ.

1. ಅವುಗಳಲ್ಲಿ ಅಗ್ರಗಣ್ಯವಾದದ್ದು ಶ್ರೀಮಟ್ಟೀಕಾಕೃತ್ಪಾದರ ಸಾಕ್ಷಾತ್ ಶಿಷ್ಯರಾದ ಶ್ರೀ ವ್ಯಾಸತೀರ್ಥರು ರಚಿಸಿದ ಟೀಕೆ. ಭಾಷ್ಯ ಹಾಗೂ ಉಪನಿಷತ್ತುಗಳ ಭಾವವನ್ನು ಹೃದಯಂಗಮವಾಗಿ ತೆರೆದಿಡುತ್ತದೆ. ಪ್ರಾಯಃ ಮುಂದಿನ ಎಲ್ಲ ವ್ಯಾಖ್ಯಾನಕಾರರೂ ಈ ಟೀಕೆಯನ್ನು ಉಪಜೀವಿಸಿಕೊಂಡು ವ್ಯಾಖ್ಯಾನವನ್ನು ಮಾಡಿದ್ದಾರೆ.

2. ಶ್ರೀವಾದಿರಾಜಸ್ವಾಮಿಗಳು ರಚಿಸಿದ ಪ್ರಕಾಶಿಕೆಯೂ ಶ್ರೀಮದಾಚಾರ್ಯರ ಭಾವವನ್ನು ತಿಳಿಯಲು ಅತ್ಯುಪಯುಕ್ತವಾಗಿವೆ. ಇದು ಬ್ರಹ್ಮವಲ್ಲಿಯ 14 ನೆಯ ಮಂತ್ರದವರೆಗೆ ಮಾತ್ರ ಉಪಲಬ್ಧವಾಗಿದೆ.

3. ಶ್ರೀರಾಘವೇಂದ್ರಸ್ವಾಮಿಗಳ ಖಂಡಾರ್ಥ ವಿಸ್ತೃತವಾಗಿದ್ದು ಉಪನಿಷತ್ತುಗಳ ಅರ್ಥವನ್ನು ಬಹಳ ಸುಂದರವಾಗಿ ನಿರೂಪಿಸುತ್ತದೆ. ಭಾಷ್ಯಕ್ಕೆ ಪ್ರತ್ಯೇಕವಾಗಿ ವ್ಯಾಖ್ಯಾನವನ್ನು ಬರೆಯದಿದ್ದರೂ ಭಾಷ್ಯಾಭಿಪ್ರಾಯವನ್ನು ಉಪನಿಷತ್ತಿನಲ್ಲಿ ಆರೂಢಮಾಡಿ ತಿಳಿಸುವ ಇವರ ಕ್ರಮ ಅತ್ಯದ್ಭುತವಾಗಿದೆ.

4. ಶ್ರೀ ಶ್ರೀನಿವಾಸತೀರ್ಥರು ರಚಿಸಿದ ವ್ಯಾಖ್ಯಾನ ಬಹಳ ವಿಸ್ತೃತವಾಗಿದ್ದು ಭಾಷ್ಯದ ಅಧ್ಯಯನಕ್ಕಾಗಿ ಈ ವ್ಯಾಖ್ಯಾನವನ್ನೇ ಎಲ್ಲರೂ ಅವಲಂಬಿಸುವಂತಾಗಿದೆ. ಅಷ್ಟು ವಿಶಿಷ್ಟವಾಗಿದೆ ಈ ವ್ಯಾಖ್ಯಾನ. ಶ್ರೀನಿವಾಸತೀರ್ಥರು ಭಾಷ್ಯಕ್ಕೆ ವ್ಯಾಖ್ಯಾನಮಾಡುವುದರ ಜೊತೆಗೆ ಉಪನಿಷತ್ತುಗಳಿಗೂ ವಿಸ್ತೃತವಾದ ವಿವರಣೆಯನ್ನು ನೀಡುತ್ತಾರೆ.

5. ಶ್ರೀಕಾಶೀಆಚಾರ್ಯರು ರಚಿಸಿದ ವ್ಯಾಖ್ಯಾನವು ಪೂರ್ಣವಾಗಿ ಲಭಿಸದಿದ್ದರೂ ಭಾಷ್ಯದಲ್ಲಿ ಮೂಡಿಬಂದ ಅನೇಕ ವಿಶೇಷಗಳನ್ನು ತಿಳಿಸುವಲ್ಲಿ ನಮಗೆ ಅತ್ಯಂತ ಉಪಕಾರಕವಾಗಿದೆ. ಇವರೂ ಭಾಷ್ಯ ಹಾಗೂ ಉಪನಿಷತ್ತುಗಳಿಗೆ ಪ್ರತ್ಯೇಕವಾಗಿ ವ್ಯಾಖ್ಯಾನವನ್ನು ಮಾಡಿದ್ದಾರೆ.

6. ಶ್ರೀವರದತೀರ್ಥರ ವ್ಯಾಖ್ಯಾನವೂ ಭಾಷ್ಯದ ವಿವರಣೆಯನ್ನು ಮನೋಜ್ಞವಾಗಿ ಮಾಡುತ್ತದೆ. ಅನೇಕ ಸ್ಥಳದಲ್ಲಿ ಶ್ರೀವ್ಯಾಸತೀರ್ಥರ ಅಭಿಪ್ರಾಯವನ್ನೇ ವರದತೀರ್ಥರು ತಮ್ಮ ವ್ಯಾಖ್ಯಾನದಲ್ಲಿ ಮೂಡಿಸುವ ಮೂಲಕ ಶ್ರೀವ್ಯಾಸತೀರ್ಥರಲ್ಲಿಯ ತಮ್ಮ ಗೌರವಾದರಗಳನ್ನು ವಿಶೇಷವಾಗಿ ತೋರಿದ್ದಾರೆ.

ಈ ಉಪನಿಷತ್ತಿಗೆ ಶ್ರೀಸತ್ಯಪ್ರಿಯತೀರ್ಥರು ರಚಿಸಿದ ವ್ಯಾಖ್ಯಾನವೂ ಇದೆ. ಜೀರ್ಣವಾದ ಹಸ್ತಪ್ರತಿಯ ರೂಪದಲ್ಲಿರುವ ಈ ವ್ಯಾಖ್ಯಾನದ ಶುದ್ಧ ಹಸ್ತಪ್ರತಿಯ ಸಂಶೋಧನೆ ನಡೆಯಬೇಕಿದೆ.

ಹೀಗೆ ಅತಿ ಅಪರೂಪವಾದ ಪ್ರಮೇಯಗಳನ್ನೊಳಗೊಂಡ ಆರು ವ್ಯಾಖ್ಯಾನಗಳನ್ನು ಇಲ್ಲಿ ಸಂಗ್ರಹಿಸಿ ಸಂಪಾದಿಸಲಾಗಿದೆ.

ಸಂಪಾದನಾಕಾರ್ಯಕ್ಕೆ ಶ್ರೀವ್ಯಾಸತೀರ್ಥರ, ಶ್ರೀನಿವಾಸತೀರ್ಥರ ಹಾಗೂ ಶ್ರೀರಾಘವೇಂದ್ರಸ್ವಾಮಿಗಳ ವ್ಯಾಖ್ಯಾನಗಳಿಗಾಗಿ ಕುಂಭಕೋಣದ ವಾಲೀಪ್ರತಿಗಳನ್ನು ಶ್ರೀವಾದಿರಾಜರ ಹಾಗೂ ಶ್ರೀರಾಘವೇಂದ್ರಸ್ವಾಮಿಗಳ ವ್ಯಾಖ್ಯಾನಗಳಿಗಾಗಿ ಪೂರ್ಣಪ್ರಜ್ಞಸಂಶೋಧನಮಂದಿರದಿಂದ ಪ್ರಕಾಶಿತವಾದ ಉಪನಿಷದ್ಭಾಷ್ಯಪುಸ್ತಕವನ್ನೂ ಅವಲಂಬಿಸಿದ್ದೇನೆ. ಶ್ರೀವರದತೀರ್ಥರ ವ್ಯಾಖ್ಯಾನ ಅಪ್ರಕಾಶಿತವಾಗಿದ್ದು ಅದರ ಹಸ್ತಪ್ರತಿಯನ್ನು ಶ್ರೀ ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರು ನೀಡಿರುತ್ತಾರೆ. ಕಾಶೀಆಚಾರ್ಯರ ವ್ಯಾಖ್ಯಾನದ ಹಸ್ತಪ್ರತಿಯನ್ನು ಶ್ರೀಸತ್ಯಪ್ರಮೋದಗ್ರಂಥಭಂಡಾರದಿಂದ ಪಡೆಯಲಾಗಿದೆ. ಇದಲ್ಲದೇ ಮೇಲಿನ ಎಲ್ಲ ವ್ಯಾಖ್ಯಾನಗಳ ಹಸ್ತಪ್ರತಿಗಳು ಪ್ರಾತಃ ಸ್ಮರಣೀಯರಾದ ಶ್ರೀಸತ್ಯಪ್ರಮೋದತೀರ್ಥರು ಸಂಗ್ರಹಿಸಿದ ಗ್ರಂಥಾಲಯದಲ್ಲಿ ದೊರಕಿದ್ದು ಅವುಗಳನ್ನೂ ಸಂಶೋಧನಾಕಾರ್ಯಕ್ಕೆ ಬಳಸಿಕೊಂಡಿದ್ದೇನೆ.

ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ ಆದೇಶದಂತೆ ಆರುವ್ಯಾಖ್ಯಾನಗಳಿಂದ ಕೂಡಿದ ತೈತ್ತಿರೀಯಭಾಷ್ಯವನ್ನು ಸಂಪಾದನೆ ಮಾಡುವ ಪ್ರಯತ್ನವನ್ನು ಯಥಾಶಕ್ತಿಯಾಗಿ ಮಾಡಿದ್ದೇನೆ.

**ಕೃತಜ್ಞತಾ ಸಮರ್ಪಣೆ**

ಈ ಪ್ರಕಾಶನದ ಸರ್ವಾಂಗೀಣ ಸಮೃದ್ಧಿಯ ಸೂತ್ರಧಾರಕರಾದ ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಚರಣಾರವಿಂದಗಳಲ್ಲಿ ಭಕ್ತಿಶ್ರದ್ಧಾಪೂರ್ವಕವಾದ ಅನಂತಾನಂತ ಸಾಷ್ಟಾಂಗ ಪ್ರಣಾಮಗಳು.

ಶ್ರೀ 1008ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಸುದೀರ್ಘ ತಪಸ್ಸಿನ ಫಲವೇ ನಮ್ಮ ಸ್ವರೂಪೋದ್ಧಾರಕ ಗುರುಗಳು. ಇವರಿಗೆ ಆಹಾರ ಬೇಕಿಲ್ಲ. ಲೌಕಿಕವಿಹಾರ ಸೇರಲ್ಲ. ನಿರಾಹಾರದಿ ಹರಿಯನ್ನರಿಯುವದೊಂದೆ ಇವರ ಕಾಯಕ. ಇವರು ಎಷ್ಟು ಸಂಪ್ರದಾಯನಿಷ್ಠರೋ ಅಷ್ಟೇ ಆಧುನಿಕರು. ಶ್ರೀಜಯತೀರ್ಥವಿದ್ಯಾಪೀಠ, ವಿದ್ಯಾರ್ಥಿವೇತನಕ್ಕಾಗಿ ಜಯಸತ್ಯಪ್ರಮೋದನಿಧಿಯ ಘೋಷಣೆ, ಬಹುಭಾಷಾ ಉಪನ್ಯಾಸಗಳು, ಪುಸ್ತಕಮುದ್ರಣ, ಶ್ರೀಸುಧಾ ಮಾಸಪತ್ರಿಕೆಯ ಪ್ರಕಟಣೆ, ಸಂಶೋಧನಾ ಕೇಂದ್ರಸ್ಥಾಪನೆ, ಶ್ರೀಜಯತೀರ್ಥವಿದ್ಯಾಪೀಠದ ಸರ್ವಾಂಗೀಣ ಅಭಿವೃದ್ಧಿ ಉದ್ಯೋಗಕೇಂದ್ರಗಳು, ವೃದ್ಧಾಶ್ರಮ-ಗೋಶಾಲೆ-ವಧುವರಾನ್ವೇಷಣಾಕೇಂದ್ರ ಸಂಸ್ಥಾಪನೆ ಹೀಗೆ ಹತ್ತೇ ಇಪತ್ತೇ ನೂರಾರು ಕಾರ್ಯಗಳು ಇವರ ಮಂದಹಾಸದ ಹಸುಗೂಸುಗಳು. ಹೀಗೆ ತಮ್ಮ ಹಸನ್ಮುಖದಿಂದ ಸಮಗ್ರಸಮಾಜವನ್ನು ಸಂತೈಸುವ ಭಗವಂತನ ಚಲಪ್ರತಿಮೆ ಇವರು. ನನ್ನಂತಹ ನೂರಾರು ವಿದ್ಯಾರ್ಥಿಗಳಿಗೆ ಪ್ರತಿನಿತ್ಯದಲ್ಲೂ ಅನ್ನವಸ್ತ್ರಗಳನ್ನು ನೀಡಿ ಪಾಠವನ್ನು ಹೇಳಿ ಸನ್ಮಾರ್ಗತೋರಿ ಸಾಧನಮಾರ್ಗದಲ್ಲಿ ನಡೆಸುತ್ತಿರುವ ನನ್ನ ವಿದ್ಯಾಗುರುಗಳಿಗೆ ಮತ್ತೊಮ್ಮೆ ಭಕ್ತಿಶ್ರದ್ಧಾಪೂರ್ವಕವಾದ ಅನಂತಾನಂತಶಿರಸಾಷ್ಟಾಂಗಪ್ರಣಾಮಗಳನ್ನು ಸಲ್ಲಿಸುತ್ತಿದ್ದೇನೆ.

ಬಿಡುವಿಲ್ಲದೇ ಭಾಗವತಾದಿ ಬರಹಗಳಲ್ಲಿ ತಲ್ಲೀನರಾದ ತಮ್ಮ ತುಂಬು ಅಂತಃಕರಣ ಹಾಗು ಅಮೂಲ್ಯಹಿತವಚನಗಳಿಂದ ನನ್ನ ಸರ್ವಾಂಗೀಣ ಏಳಿಗೆಗೆ ಕಾರಣರಾದ ಜಯತೀರ್ಥವಿದ್ಯಾಪೀಠದ ಕುಲಪತಿಗಳಾದ ಪಂ.ಪೂ.ಆಚಾರ್ಯರು (ಶ್ರೀಗುತ್ತಲಾಚಾರ್ಯರು) ಸೋನ್ ಗ್ರಾಮದಲ್ಲಿ ನಡೆದ ಶ್ರೀಮನ್ಮಧ್ವಸಿದ್ಧಾಂತಾಭಿವೃದ್ಧಿಕಾರಣ ಸಭಾ ಮಹಾಸಮಾರಾಧನಾ ಮುಗಿಯುತ್ತಿದ್ದಂತೆ ಅಲ್ಲಿಗೆ ಆಗಮಿಸಿದ ಜಯತೀರ್ಥವಿದ್ಯಾಪೀಠದ ಅನೇಕ ವಿದ್ವಾಂಸರ ಸಮಕ್ಷಮದಲ್ಲಿ ನನ್ನನ್ನು ಕುಳ್ಳಿರಿಸಿ ಕೊಂಡು

ನಾನು ಸಂಶೋಧಿಸಲು ಹೊರಟ ಗ್ರಂಥದಲ್ಲಿ ಅಡಗಿದ ಲೋಪದೋಷಗಳನ್ನು ಸರಿ ಪಡಿಸಿ ನನ್ನ ಮೇಲೆ ವಿಶೇಷ ಕರುಣೆಯನ್ನು ತೋರಿದ ಆ ಮಹನೀಯರ ಚರಣಾರವಿಂದಗಳಲ್ಲಿ ಭಕ್ತಿಶ್ರದ್ಧಾಪೂರ್ವಕನಮನಗಳನ್ನು ಸಮರ್ಪಿಸುತ್ತೇನೆ.

ಎಲ್ಲ ಹಂತಗಳಲ್ಲಿ ಸೂಕ್ತಸಲಹೆಗಳನ್ನು ನೀಡುತ್ತ ಬಂದ ಜಯತೀರ್ಥವಿದ್ಯಾಪೀಠದ ಪ್ರಾಂಶುಪಾಲರಾದ ಪಂ.ಶ್ರೀ ಸತ್ಯಧ್ಯಾನಾಚಾರ್ಯರಿಗೆ ಹಾಗು ವಿಶ್ವಮಧ್ವಮಹಾಪರಿಷತ್ತಿನ ಅಧೀಕ್ಷಕರಾದ ಪಂ. ಶ್ರೀವಿದ್ಯಾಧೀಶಾಚಾರ್ಯರಿಗೆ ನನ್ನ ಪ್ರಣಾಮಗಳು.

ಸಂಶೋಧನಾಕಾರ್ಯಕ್ಕಾಗಿ ವರದತೀರ್ಥರ ವ್ಯಾಖ್ಯಾನದ ಹಸ್ತಪ್ರತಿಯನ್ನು ಒದಗಿಸಿದ ಡಾ. ವ್ಯಾಸನಕೆರೆ ಪ್ರಂಭಜನಾಚಾರ್ಯರಿಗೆ ಹಾಗೂ ಈ ನನ್ನ ಪ್ರಯತ್ನದಲ್ಲಾದ ಅಕ್ಷರದೋಷಗಳನ್ನು ತಿದ್ದಿ ಸರಿಯಾಗಿ ಮಾರ್ಗದರ್ಶನ ಮಾಡಿದ ನನ್ನ ಹಿರಿಯ ಅಗ್ರಜರಂತೆ ಇರುವ ಪಂ. ಶ್ರೀ ವಾದಿರಾಜಾಚಾರ್ಯ ಕರಣಂ ಇವರಿಗೆ ನನ್ನ ಹೃತ್ಪೂರ್ವಕನಮನಗಳು.

ನಾನು ಮುನ್ನುಡಿಯಲ್ಲಿ ಬರೆದ ಉಪನಿಷತ್ತಿನ ಕನ್ನಡಭಾವಾನುವಾದವನ್ನು ತಾಳ್ಮೆಯಿಂದ ಕೇಳಿ ಓದಿ ಅದರಲ್ಲಿರುವ ಅನೇಕ ಬದಲಾವಣೆಗಳನ್ನು ನಿಧಾನವಾಗಿ ನನ್ನ ಮನಮುಟ್ಟುವಂತೆ ವಿವರಿಸಿ ಅದನ್ನು ಸರಿಪಡಿಸಿದ, ನನಗೆ ಈ ಶ್ರೇಷ್ಠವಾದ ಮಾಧ್ವಜನ್ಮವನ್ನು ನೀಡಿದ ನನ್ನ ತಂದೆಯಾದ ಬಿ.ಎಲ್.ರಾಮರಾವ್ ಇವರಿಗೆ ಶಿರಸಾಷ್ಟಾಂಗನಮಸ್ಕಾರಗಳು.

ಈ ಪುಸ್ತಕದ ಪ್ರಕಾಶನಕ್ಕೆ ಧನಸಹಾಯವನ್ನು ಮಾಡಿದ ಮುಂಬಯಿಯ ಶ್ರೀವಿಜಯ ಬಸರಕೋಡ ಇವರಿಗೆ, ಈ ಗ್ರಂಥ ಅಚ್ಚುಕಟ್ಟಾಗುವಂತೆ ವಿನ್ಯಾಸ ಮಾಡಿದ ಪಂ ಮಹಿದಾಸಾಚಾರ್ಯ ಇವರಿಗೆ ಹಾಗೂ ಸುಂದರವಾಗಿ ಮುಖಪುಟವಿನ್ಯಾಸ ಮಾಡಿದ ಶ್ರೀ ಗೋಪಾಲಕೃಷ್ಣನಿಗೆ ಸಮಯಕ್ಕೆ ಸರಿಯಾಗಿ ಓರಣವಾಗಿ ಮುದ್ರಿಸಿದ ವಾಗರ್ಥ ಮುದ್ರಣಾಲಯದವರಿಗೆ ನನ್ನ ಕೃತಜ್ಞತೆಗಳು.

ಸುಧೀಜನವಿಧೇಯ

**ಬಿ.ಆರ್.ವೆಂಕಟೇಶಾಚಾರ್ಯ**

# ಪ್ರಕಾಶಕರ ಮಾತು

ಶ್ರೀ ಶ್ರೀ 1008 ಶ್ರೀ ಸತ್ಯಾತ್ಮತೀರ್ಥರು ಹುಟ್ಟು ಹಾಕಿದ ಸಂಸ್ಥೆ ವಿಶ್ವಮಧ್ವಮಹಾ ಪರಿಷತ್. ವಿಶ್ವದಲ್ಲೆಲ್ಲ ಮಧ್ವರ ಮತವನ್ನು ಪ್ರಚಾರಮಾಡಬೇಕೆಂಬ ಹೆಗ್ಗುರಿಯಿಂದ ರೂಪುಗೊಂಡ ಸಂಸ್ಥೆ ಇದು. ಕಾಲಕ್ಕೆ ತಕ್ಕಂತೆ ಹೊಸ ಉತ್ಸಾಹದಿಂದ ಈ ಸಂಸ್ಥೆಯ ಚಟುವಟಿಕೆಗಳು ಮೆರಗುಗೊಳ್ಳುತ್ತಲೇ ಇವೆ.

ನಮ್ಮ ಸಂಸ್ಥೆಯು ಪ್ರಾಚೀನವಾದ ಅಪ್ರಕಟಿತವಾದ ಸಮಗ್ರ ಮಾಧ್ವಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಈಗಾಗಲೇ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ, ಸಾಮಾನ್ಯಜನರಿಗೆ ಉಪಯುಕ್ತವಾದ ಸಂಸ್ಕೃತ, ಕನ್ನಡ, ತೆಲುಗು, ಹಿಂದಿ, ಮರಾಠಿ, ತಮಿಳು ಹಾಗು ಆಂಗ್ಲಭಾಷೆಗಳಲ್ಲಿ ಅನೇಕಗ್ರಂಥಗಳು ಈ ಸಂಸ್ಥೆಯಿಂದ ಪ್ರಕಾಶಿತವಾಗಿವೆ. ಇನ್ನೂ ಅನೇಕ ಗ್ರಂಥಗಳ ಪ್ರಕಾಶನದ ಕಾರ್ಯ ಭರದಿಂದ ಸಾಗಿದೆ.

ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥರ ಅನುಗ್ರಹದ ಬೆಂಬಲ ಹಾಗೂ ಪರಮಪೂಜ್ಯ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ ಆಶೀರ್ವಾದ ಹಾಗೂ ಮಾರ್ಗದರ್ಶನಗಳು ಈ ಎಲ್ಲ ಕಾರ್ಯಗಳ ಯಶಸ್ಸಿಗೆ ಕಾರಣವಾಗಿವೆ.

ಪ್ರಕೃತ **ತೈತ್ತಿರೀಯೋಪನಿಷದ್ಭಾಷ್ಯವು** ಆರು ಅಪೂರ್ವವ್ಯಾಖ್ಯಾನಗಳಿಂದ ಪ್ರಕಾಶಿತವಾಗುತ್ತಿರುವದು ಪರಿಷತ್ತಿಗೆ ಹೆಮ್ಮೆಯ ವಿಷಯ.

ಇದನ್ನು ಸಂಪಾದನೆ ಮಾಡಿದ ಪಂ. ಬಿ.ಆರ್.ವೆಂಕಟೇಶಾಚಾರ್ಯ ಇವರಿಗೆ, ಗ್ರಂಥಪ್ರಕಾಶನಕ್ಕಾಗಿ ಮುದ್ರಣಕ್ಕಾಗಿ ಸಂಪೂರ್ಣವಾಗಿ ಧನಸಹಾಯ ಮಾಡಿದ ಮುಂಬಯಿಯ ಶ್ರೀ ವಿಜಯ ಬಸರಕೋಡ ಇವರಿಗೆ

ಹಾಗೂ ಸುಂದರವಾಗಿ ಮುದ್ರಣಮಾಡಿದ ವಾಗರ್ಥ ಮುದ್ರಣಾಲಯದವರಿಗೆ, ಅಲ್ಲದೆ ಈ ಗ್ರಂಥದ ಪ್ರಕಾಶನಕ್ಕಾಗಿ ಸಹಾಯಮಾಡಿದ ಎಲ್ಲರಿಗೂ ಪರಿಷತ್ತು ಆಭಾರಿಯಾಗಿದೆ.

ಪ್ರಧಾನ ಕಾರ್ಯದರ್ಶಿಗಳು
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ
ಬಸವನಗುಡಿ ಬೆಂಗಳೂರು - 4

# ತೈತ್ತಿರೀಯೋಪನಿಷತ್ತಿನ ಸಾರ ಸಂಗ್ರಹ

**ಸತ್ಯಂ ಜ್ಞಾನಮನಂತಮಾನಂದಂ ಬ್ರಹ್ಮ ಸರ್ವಶಕ್ತ್ಯೇಕಮ್ ।**
**ಸರ್ವೈರ್ದೇವೈರೀಡ್ಯಂ ವಿಷ್ಣ್ವಾಖ್ಯಂ ಸರ್ವದೈವಮಿ ಸುಪ್ರೇಷ್ಠಮ್ ॥**

ತೈತ್ತಿರಿಯೋಪನಿಷತ್ತು ವಿಷ್ಣುವಿನ ಮಹಿಮಾತಿಶಯವನ್ನು ತಿಳಿಸಲು ಹೊರಟಿದೆ. ಹರಿಯ ಹಿರಿಮೆಯ ಅರಿವು, ಹರಿಯಲಿ ಹರಿಯುವ ನಿರಂತರ ಅನುರಕುತಿ ಇವುಗಳಿಂದಲೇ ಇಷ್ಟ ಪ್ರಾಪ್ತಿ. ಶಮದಮಾದಿಯುತನಾಗಿ ಮೋಕ್ಷಬಯಸುವ ಜಿಜ್ಞಾಸುವೇ ಈ ಉಪನಿಷದ್ವಿದ್ಯೆಗೆ ಅಧಿಕಾರಿ. ತಾನು ಅಧಿಕಾರಿಯೆನಿಸಿದ ಮಾತ್ರಕ್ಕೆ ಉಪನಿಷತ್ತುಗಳಿಂದ ಭಗವಂತನನ್ನು ನೇರವಾಗಿ ತಿಳಿಯಲು ಸಾಧ್ಯವಿಲ್ಲ. ಗುರುಗಳ ಉಪದೇಶ ಅವನಿಗೆ ಅವಶ್ಯವಾಗಿ ಬೇಕು. ಗುರೂಪದೇಶದ ರೂಪದಲ್ಲಿ ಪ್ರವೃತ್ತವಾದ ಈ ಉಪನಿಷತ್ತು ಗುರೂಪದೇಶವಿಲ್ಲದೆ ಅಧಿಕಾರಿಯಾದವನಿಗೂ ನಿಶ್ಚಿತಜ್ಞಾನವನ್ನು ತಂದುಕೊಡಲಾರದು ಎನ್ನುವ ಸಂದೇಶವನ್ನು ತಿಳಿಸುವಂತಿದೆ. ಹರಿಯನ್ನರಿತ ಹಿರಿಯರ ತತ್ತ್ವೋಪದೇಶವು ಅವನಿಗಾಗಬೇಕು.

ಅಜ್ಞಾನಿಗಳಿಗೆ ಉಪನಿಷತ್ತಿನಿಂದ ವಿಷ್ಣುವಿನ ವಿಸ್ತಾರವಾದ ಮಹಿಮೆ ಸರಿಯಾಗಿ ತಿಳಿಯಬೇಕು ಎಂಬ ಕಾರಣಕ್ಕಾಗಿ ಆಚಾರ್ಯರು ಸ್ವಕಪೋಲಕಲ್ಪಿತವಾದಗಳನ್ನು ನಿರಾಕರಣೆ ಮಾಡಿ ಇತಿಹಾಸ-ಪುರಾಣಗಳ ಸಂವಾದದಿಂದ ಇದಕ್ಕೆ ಭಾಷ್ಯವನ್ನು ಬರೆದಿದ್ದಾರೆ.

ಶ್ರೇಯಾಂಸಿ ಬಹುವಿಘ್ನಾನಿ ಎಂದು ಹೇಳಿದಂತೆ ಒಳ್ಳೆಯಕಾರ್ಯಗಳನ್ನು ಮಾಡುವಾಗ ವಿಘ್ನಗಳೇ ಅಧಿಕ. ಗ್ರಂಥರಚನೆಯೂ ಒಂದು ಸತ್ಕಾರ್ಯವೇ ಆದ್ದರಿಂದ ವಿಘ್ನಗಳು ಬರುವದು ಸಹಜ. ಅವುಗಳ ಪರಿಹಾರಕ್ಕೆ ಮಂಗಲವನ್ನು ಆಚರಿಸಬೇಕು. ವಿಘ್ನವಿದೂರರಾದ ಮಧ್ವಾಚಾರ್ಯರಿಗೆ ವಿಘ್ನಲವಲೇಶವಿಲ್ಲದಿದ್ದರೂ ಶಿಷ್ಟಾಚಾರವನ್ನು ಗಮನದಲ್ಲಿಟ್ಟುಕೊಂಡು ಮಂಗಳಪದ್ಯವನ್ನು ನಿಬಂಧನೆಮಾಡಿರುತ್ತಾರೆ.

ಭಗವಂತನ ಎಲ್ಲ ರೂಪಗಳು ಮಂಗಲವೇ ಸರಿ. ಆದರೂ ಗ್ರಂಥಪ್ರತಿಪಾದ್ಯವಾದ ವಿಷ್ಣು ರೂಪವನ್ನು ಉಪಾಸನೆ ಮಾಡುತ್ತಿರುವದು ಇಲ್ಲಿ ತೋರುವ ಮತ್ತೊಂದು ವಿಶೇಷ.

ವರ್ಣಗಳ ಎಣಿಕೆಯಿಂದ ಛಂದಸ್ಸುಗಳು ಸುಲಭವಾಗಿ ತಿಳಿದು ಬಿಡುತ್ತವೆ. ಇದನ್ನು ಎಲ್ಲರೂ ತಿಳಿಯಬಹುದು. ಇನ್ನೊಬ್ಬರಿಗೂ ತಿಳಿಸಬಹುದು. ಆದರೆ ವರ್ಣಪ್ರತಿಪಾದ್ಯ-ದೇವತೆಗಳು ಹಾಗು ಋಷಿಗಳ ಜ್ಞಾನಮಾಡಿಕೊಳ್ಳುವದು ಕ್ಲಿಷ್ಟಕರ. ಶ್ರೀಮದಾಚಾರ್ಯರು ಪ್ರತಿಪಾದ್ಯದೇವತೆ ಋಷಿ ಇವುಗಳನ್ನು ಪ್ರಮಾಣಪುರಸ್ಸರವಾಗಿ ತಿಳಿಸಿರುತ್ತಾರೆ.

ಈ ಉಪನಿಷತ್ ಪ್ರತಿಪಾದ್ಯದೇವತೆ ವಿಷ್ಣು ಇದೇ ಉಪನಿಷತ್ತಿನಲ್ಲಿ ಬರುವ ನಾಲ್ಕಾರು ಮಾತುಗಳಿಂದ ವಿಷ್ಣುವೇ ಈ ಗ್ರಂಥಪ್ರತಿಪಾದ್ಯ ಎಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ.

**... ಮಂಗಲಾರ್ಥ...**

**ವಿಷ್ಣ್ವಾಖ್ಯಂ ಸರ್ವದೈಮಿ-**

ಜಗತ್ತು ಭಗವಂತನ ಆವಾಸಸ್ಥಾನ. ಆ ಮಹಾವಿಷ್ಣುವಿನಿಂದಲೇ ಇಲ್ಲಿರುವ ಸಕಲಜೀವರಾಶಿಗಳ ರಕ್ಷಣೆ. ಸ್ವತಃಪ್ರವೃತ್ತ್ಯಾದಿಗಳಿಲ್ಲದ ಈ ಜಗತ್ತಿಗೆ ಸಿರಿ, ವೀರ್ಯ, ಕೀರ್ತಿ, ಸೊಬಗು, ಜ್ಞಾನ, ವೈರಾಗ್ಯ ಮೊದಲಾದವುಗಳ ಪೂರೈಕೆ ಷಡ್ಗುಣೈಶ್ವರ್ಯ- ಸಂಪನ್ನನಾದ ವಿಷ್ಣುವಿನಿಂದಲೇ ಆಗಬೇಕು. ಅದಕ್ಕಾಗಿ ವಿಷ್ಣು ಈ ಜಗತ್ತಿನಲ್ಲಿ ವಾಮನನಾಗಿ ಪ್ರವೇಶಿಸಿ ತ್ರಿವಿಕ್ರಮನಾಗಿ ವ್ಯಾಪಿಸಿ ನಿಂತ. ಅನ್ನುವದಕ್ಕಾಗಿಯೇ ವಿಷ್ಣು ಎನಿಸಿದ. ಹೀಗೆ ಜಗತ್ತಿನ ತುಂಬೆಲ್ಲ ವ್ಯಾಪಿಸಿದ ವಿಷ್ಣುವನ್ನು ನಿರಂತರವಾಗಿ ಭಜಿಸುತ್ತೇನೆ.

ಇಲ್ಲಿ ಆಚಾರ್ಯರು ಮಂಗಲಪದ್ಯವನ್ನು ನಿಬಂಧನೆ ಮಾಡಲು ಹೊರಟದ್ದು ವಿಘ್ನಗಳನ್ನು ಕಳೆದುಕೊಳ್ಳುವದಕ್ಕಾಗಿ ಅಲ್ಲ. ಭಗವದಾರಾಧನೆ ಇದು ನನ್ನ ಸ್ವಭಾವ ಅದನ್ನು ತಿಳಿಸುವದಕ್ಕಾಗಿ **ಸರ್ವದೈಮಿ** ಎಂದಿದ್ದಾರೆ.

ಮಹಾವಿಷ್ಣುವು ಎಲ್ಲ ವಸ್ತುಗಳನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವ ಮೂಲಕ ಎಲ್ಲರನ್ನೂ ಆಳುವ ದೊರೆ ಎನಿಸಿರುತ್ತಾನೆ. ಆಳುವ ಶಕ್ತಿ, ಸಾಮರ್ಥ್ಯ ಅವನಲ್ಲಿದೆ ಅನ್ನುವದಕ್ಕಾಗಿ ಅವನು **ಸರ್ವಶಕ್ತ.**

ತನ್ನ ಗುಣಕ್ರಿಯಾದಿಗಳಿಂದ ಅಭಿನ್ನ ಆದ್ದರಿಂದ **ಏಕಂ** ಎಂದು ಹೇಳಲಾಗಿದೆ.

ಸಕಲಗುಣಗಳಿಂದ ಪೂರ್ಣನಾದದ್ದರಿಂದ **ಬ್ರಹ್ಮ** ಶಬ್ದಪ್ರತಿಪಾದ್ಯನು.

ಈ ಉಪನಿಷತ್ತಿನಲ್ಲಿ ತೋರುವ ಮತ್ತೊಂದು ವಿಶೇಷವೆಂದರೆ ಮಂಗಲಪದ್ಯದಲ್ಲಿ ನಿಬಂಧನೆ ಮಾಡಲಾದ ಸತ್ಯಾದಿಪದಗಳು ಇದೇ ಉಪನಿಷತ್ತಿನ ಮುಂದಿನ ಮಂತ್ರಗಳಲ್ಲಿ ಬಹಳ ಸುಂದರವಾಗಿ ನಿರೂಪಿತವಾಗಿವೆ.

ಸತ್ಯಂ ಜ್ಞಾನಮನಂತಂ ಬ್ರಹ್ಮ ಎನ್ನುವದರಿಂದ ಸತ್ಯತ್ವವು, **'ಆನಂದೋ ಬ್ರಹ್ಮ' 'ಕೋಹ್ಯೇವಾನ್ಯಾತ್'**, ಎನ್ನುವ ವಾಕ್ಯದಿಂದ ಬ್ರಹ್ಮನ ಆನಂದತ್ವವು, 'ಇದಂ ಸರ್ವಮಸೃಜತ್' ಎನ್ನುವದರಿಂದ ಸರ್ವಶಕ್ತತ್ವವು, ಭಗವಂತನಿಗೂ ಅವನ ಗುಣಗಳಿಗೂ ಅಭೇದವು **'ತನ್ಮನ ಇತ್ಯುಪಾಸೀತ'** ಎನ್ನುವದರಿಂದ, **'ಸರ್ವದೇವೈರೀಡ್ಯಂ'** ಎನ್ನುವದರಿಂದ ದೇವತೆಗಳಿಂದ ಪೂಜ್ಯನು ಎನ್ನುವದನ್ನು ತಿಳಿಸಿ ಕೊನೆಗೆ **'ತತ್ಸೃಷ್ಟ್ವಾ ತದೇವಾನುಪ್ರಾವಿಶತ್'** ಎನ್ನುವದರಿಂದ ವಿಷ್ಣುತ್ವವನ್ನು ಹೇಳಲಾಗಿದೆ.

## ಅಥ ಶಿಕ್ಷಾವಲ್ಲೀ

### ... ಶಾಂತಿ ಮಂತ್ರದ ಅರ್ಥ...

ಜಗತ್ತಿಗೆ ಬೆಳಕನ್ನು ನೀಡುವ ದೇವತೆ ಅವನು ಸೂರ್ಯ. ಆ ಬೆಳಕಿನಲ್ಲಿ ಪದಾರ್ಥಗಳ ಜ್ಞಾನವಾಗುವಂತೆ ಮಾಡುವ ದೇವತೆಯೂ ಆ ಸೂರ್ಯನೇ. ಕಣ್ಣಿಗೆ ಪದಾರ್ಥಗಳ ದರ್ಶನವಾಗಬೇಕು. ನಂತರ ಜ್ಞಾನ ಹುಟ್ಟುವ ಪ್ರಕ್ರಿಯೆ. ಕಣ್ಣುಗಳಿಗೆ ಪದಾರ್ಥಗಳ ದರ್ಶನವಾಗುವಂತೆ ಮಾಡುವವನು ಸೂರ್ಯ. ಆ ಸೂರ್ಯನ ಅನುಗ್ರಹವನ್ನು ಯಾಚಿಸುವ ಮೂಲಕ ಉಪನಿಷತ್ತು ಆರಂಭಗೊಳ್ಳುತ್ತದೆ. ಮಿತ್ರ ಎಂಬ ನಾಮದಿಂದ ಪ್ರಸಿದ್ಧನಾದ ಸೂರ್ಯದೇವತೆಯು ಅಧ್ಯಯನಕಾಲದಲ್ಲಿ ನಮಗೆ ಸುಖವಾಗಿ ಅಧ್ಯಯನ ನಡೆಯುವಂತೆ ಅನುಗ್ರಹಿಸಲಿ. ಅಬಭಿಮಾನಿಯಾದ ವರುಣನು, ಅರ್ಯಮನೆಂಬ ಸೂರ್ಯನು ನಮಗೆ ಎಲ್ಲಡೆಯೂ ಸುಖವನ್ನು ನೀಡಲಿ. ಮಹೈಶ್ವರ್ಯಸಂಪನ್ನನಾದ ಇಂದ್ರನು, ಬುದ್ದಿಯಲ್ಲಿ ಚತುರನೆನಸಿದ ದೇವತೆಗಳ ಗುರು ಬೃಹಸ್ಪತಿಯು ನಮಗೆ ಸುಖಪ್ರದನಾಗಲಿ.

ಇಲ್ಲಿ ಎಲ್ಲ ಇಂದ್ರಿಯಾಭಿಮಾನಿದೇವತೆಗಳನ್ನು ಪ್ರತ್ಯೇಕವಾಗಿ ಹೆಸರಿಸದೇ ಮಿತ್ರ, ವರುಣ ಹಾಗು ಅರ್ಯಮದೇವತೆಗಳ ಹೆಸರನ್ನು ಮಾತ್ರ ಉಲ್ಲೇಖಿಸಿ ಆ ದೇವತೆಗಳ ಕರುಣೆಯನ್ನು ಪ್ರಾರ್ಥಿಸಲಾಗಿದೆ. ಈ ಮಾತಿನ ಮೇಲೆ ಕೆಲವು ಸಂದೇಹಗಳು ಹೀಗೆ ತಲೆದೋರುತ್ತವೆ. ಎಲ್ಲ ಇಂದ್ರಿಯಾಭಿಮಾನಿದೇವತೆಗಳ ಹೆಸರನ್ನು ತೆಗೆದುಕೊಳ್ಳುವ ವಿವಕ್ಷೆ ಇದ್ದರೆ ಎಲ್ಲ ದೇವತೆಗಳ ಹೆಸರನ್ನು ಹೇಳಿ ಅನುಗ್ರಹವನ್ನು ಯಾಚಿಸಬೇಕಾಗಿತ್ತು. ಒಬ್ಬ ದೇವತೆಯ ಹೆಸರನ್ನು ಹೇಳಿ ಉಪಲಕ್ಷಣತಯಾ ಉಳಿದವರನ್ನು ತೆಗೆದುಕೊಳ್ಳುವ ವಿವಕ್ಷೆ ಇದ್ದರೆ ಒಬ್ಬರ ಹೆಸರನ್ನು ಮಾತ್ರವೇ ಹೇಳಬಹುದಾಗಿತ್ತು ಮೂವರು ದೇವತೆಗಳ ಹೆಸರನ್ನು ಹೇಳುವದರ ಔಚಿತ್ಯವೇನು?

ಇದಕ್ಕೆ ಕಾಶೀ ಆಚಾರ್ಯರು ನೀಡಿದ ಸಮಾಧಾನ ಹೀಗಿದೆ- ಮಿತ್ರ ಇವನು ಹಗಲಿಗೆ ಅಭಿಮಾನಿದೇವತೆ. ಸ್ವಾಧ್ಯಾಯಪ್ರವಚನಗಳು ಹಗಲಿನಲ್ಲಿಯೇ ನಡೆಯಬೇಕಾದ ಕರ್ಮಗಳು. ಈ ದೇವತೆಯ ಅನುಗ್ರಹದಿಂದಲೇ ಪಾಠಪ್ರವಚನಾದಿ-ಕರ್ಮಗಳು ನಿರ್ವಿಘ್ನವಾಗಿ ನಡೆಯುತ್ತವೆ. ಅನ್ನುವದಕ್ಕಾಗಿ ಮೊದಲು ಮಿತ್ರನನ್ನು ಪ್ರಾರ್ಥಿಸಲಾಗಿದೆ. ಕರ್ಮೇಂದ್ರಿಯದೇವತೆಯಾದ ಮಿತ್ರನು ನಮಗೆ ಸುಖವನ್ನು ಕೊಡಲಿ.

ಇನ್ನು ಅರ್ಯಮಾ ಹಾಗು ವರುಣರು ಜ್ಞಾನೇಂದ್ರಿಯಾಭಿಮಾನಿದೇವತೆಗಳು. ಇವರಲ್ಲಿ ಅರ್ಯಮನ (ಸೂರ್ಯನ) ಕೆಲಸವೆಂದರೆ ಪ್ರತಿನಿತ್ಯ ನಮಗೆ ಸಕಲ

ಪದಾರ್ಥಗಳ ಜ್ಞಾನವನ್ನು ಮಾಡಿಸಿ ಕೊಡುವದು. ಇವನು ಜ್ಞಾನೇಂದ್ರಿಯಾಭಿಮಾನಿ ದೇವತೆಗಳಿಗೆ ಉಪಲಕ್ಷಕನಷ್ಟೇ. ಇವನು ಜಗತ್ತಿಗೆ ಬೆಳಕನ್ನು ನೀಡುವದಲ್ಲದೇ ಆ ಬೆಳಕಿನಲ್ಲಿ ಪದಾರ್ಥಗಳ ಜ್ಞಾನವಾಗುವಂತೆ ಮಾಡುವ ದೇವತೆ.

ಇದಕ್ಕೆ ವಿಪರೀತವಾಗಿ ಸಾಧನೆಗೆ ಪ್ರತಿಬಂಧಕವಾದ ಬಲಿಷ್ಠವಾದ ಇಂದ್ರಿಯವೆಂದರೆ ರಸನೇಂದ್ರಿಯ. ಅದಕ್ಕೆ ಅಭಿಮಾನಿದೇವತೆ ವರುಣ. ಆ ವರುಣನಲ್ಲಿ ಪ್ರಾರ್ಥಿಸುವದಿಷ್ಟೆ ಸಾಧನೆಗೆ ಪ್ರತಿಬಂಧಕವಾಗದೇ ಇರುವಂತೆ ವರುಣದೇವತೆ ಅನುಗ್ರಹಿಸಲಿ ಎನ್ನುವದು ಉಪನಿಷತ್ತಿನ ಆಂತರ್ಯ.

ಈ ಅಭಿಪ್ರಾಯದಿಂದಲೇ ಉಪನಿಷತ್ತು ಮಿತ್ರ, ಅರ್ಯಮಾ ಹಾಗು ವರುಣರನ್ನು ಪ್ರತ್ಯೇಕ ಪ್ರಾರ್ಥಿಸಿದ್ದು ಎನ್ನುತ್ತಾರೆ ಕಾಶೀ ಆಚಾರ್ಯರು.

**ಶನ್ನೋ ಮಿತ್ರ** ಇತ್ಯಾದಿಶ್ರುತಿಗಳು ಬ್ರಹ್ಮಾದಿದೇವತೆಗಳು ಮಾಡಿದ ಸ್ತೋತ್ರದ ಭಾವಾನುವಾದವಷ್ಟೆ. ಇವು ಮೂಲಮಂತ್ರಗಳಲ್ಲ. ಬ್ರಹ್ಮಾದಿದೇವತೆಗಳು ಮಾಡಿದ ಸ್ತೋತ್ರಭಾಗವು ಬೇರೊಂದಿದೆ ಎನ್ನುವದು ಕೆಲವರ ವಾದ.

ಇದಕ್ಕೆ ಯಜುಃಸಂಹಿತೆಯ ವಾಕ್ಯದಿಂದ ಆಚಾರ್ಯರು ನೀಡಿದ ಸಮಾಧಾನವು ಭಾಷ್ಯದಲ್ಲಿ ಬಹಳ ಸೊಗಸಾಗಿ ಮೂಡಿಬಂದಿದೆ.

**ಯದುವಾಚ ಹರಿಸ್ಸೂರ್ಯಮಂಡಲಸ್ಥಃ ಪರಃ ಪುಮಾನ್ ।**
**ಬ್ರಹ್ಮಾ ತದಾಹ ವರುಣೇ ವರುಣೋ ಭೃಗವೇಽಪಿ ತು ॥**
**ಶನ್ನೋ ಮಿತ್ರಾದಿರ್ಭಿವಾಕ್ಯೈಸ್ಸ್ವೈರೇವ ಹರಿಮಸ್ತುವತ್ ।**

ಇಲ್ಲಿ ಶನ್ನೋ ಮಿತ್ರಾದಿಭಿಃ ಎನ್ನುವ ಮಾತಿಗೆ ಶನ್ನೋ ಮಿತ್ರಃ ಶಂ ವರುಣಃ ಇತ್ಯಾದಿವಾಕ್ಯಗಳು ಎಂದು ಅರ್ಥ ಎನ್ನುತ್ತಾರೆ ಶ್ರೀನಿವಾಸತೀರ್ಥರು.

ಭಗವಂತನ ಮುಖ್ಯಾಧಿಷ್ಠಾನರಾದ ಜ್ಞಾನಾದಿಗುಣಗಳಿಂದ ಕೂಡಿದ್ದರಿಂದ ವಾಯುಬ್ರಹ್ಮ ಶಬ್ದವಾಚ್ಯರಾದ ವಾಯು-ಬ್ರಹ್ಮರಿಗೆ ನಮಸ್ಕಾರವು. ಹೀಗೆ ವಾಯುಬ್ರಹ್ಮದೇವತೆಗಳಿಗೆ ಪರೋಕ್ಷವಾಗಿ ನಮನವನ್ನು ಸಲ್ಲಿಸಿ ಅಪರೋಕ್ಷವಾಗಿಯೂ ನಮನವನ್ನು ಸಲ್ಲಿಸಲಾಗುತ್ತದೆ.

ಈ ಹಿಂದೆ ನಮಸ್ಕೃತರಾದ ವಾಯುದೇವರನ್ನೇ ಮತ್ತೆ ಸ್ತುತಿಸುತ್ತಾರೆ. ವಾಯುದೇವನೆ ! ನೀನು ಪ್ರಾಣಾಪಾನಾದಿರೂಪಗಳಿಂದ ಪ್ರತ್ಯಕ್ಷವಾಗಿ ಕಂಡು ಬರುತ್ತಿರುವೆ. ಭಗವಂತನ ಬಹುಶಃ ಎಲ್ಲ ಗುಣಗಳ ಆವಿರ್ಭಾವ ನಿನ್ನಲ್ಲಿ ಆಗುತ್ತದೆ. ಅನ್ನುವದಕ್ಕಾಗಿ ಪರಬ್ರಹ್ಮನ

ಮುಖ್ಯಾಧಿಷ್ಠಾನ ಎಂದು ನಿನ್ನನ್ನೇ ಹೇಳುತ್ತಿದ್ದೇನೆ. ನೀನು ಯಥಾರ್ಥಜ್ಞಾನವುಳ್ಳವನು, ಯಥಾರ್ಥಜ್ಞಾನಪೂರ್ವಕವಾಗಿ ಉಪದೇಶಮಾಡುವವನು ಆದ್ದರಿಂದ ನನ್ನನ್ನು ಹಾಗು ಉಪದೇಶಮಾಡಲು ಮುಂದೆ ಉಪಸ್ಥಿತರಾದ ಆಚಾರ್ಯರನ್ನು ರಕ್ಷಿಸು.

ಈ ಉಪನಿಷತ್ತಿಗೆ ಪ್ರಧಾನ ಋಷಿ ಮಹಾವಿಷ್ಣು ಸರ್ವೋತ್ತಮದೇವತೆಯೊಬ್ಬ ಋಷಿಯಾಗಿರುವ ಈ ಮಂತ್ರಗಳಲ್ಲಿ ತಮಗಿಂತ ಅಧಮದೇವತೆಗಳಾದ ಬ್ರಹ್ಮವಾಯುಗಳನ್ನು **ನಮೋ ಬ್ರಹ್ಮಣೇ ನಮಸ್ತೇ ವಾಯೋ** ಎಂಬುದಾಗಿ ಪ್ರಾರ್ಥನೆ ಮಾಡಿರುವದು ಉಚಿತವೇ? ಎನ್ನುವ ಶಂಕೆಗೆ ಆಚಾರ್ಯರು ಹೀಗೆ ಸಮಾಧಾನವನ್ನು ನೀಡಿರುತ್ತಾರೆ-

ಇಲ್ಲಿ ವಿಷ್ಣು ಉಪದೇಶಿಸಿದ ಪ್ರಾರ್ಥನೆಯ ರೂಪವಾದ ಶಾಂತಿಮಂತ್ರವು ಭೃಗುವಾಕ್ಯದ ಅನುವಾದ ಮಾತ್ರ.

**ಭೃಗುವಾಕ್ಯತಯಾ ವಾಯುನಮಸ್ಕಾರಾದಿಕಂ ಹರಿಃ ।**
**ಪ್ರೋವಾಚ ಬ್ರಹ್ಮಣೇ ಚೈವಂ ವಚಸ್ಸು ಬಹುದರ್ಶಿಷು ॥**

ಬ್ರಹ್ಮವಿದ್ಯೆಯ ಅಧ್ಯಯನದ ನಿರ್ವಿಘ್ನತೆಗಾಗಿ ಭೃಗುಋಷಿಗಳು ಪ್ರಾರ್ಥಿಸಿದ ವಾಯು ನಮಸ್ಕಾರಾದಿವಾಕ್ಯಗಳನ್ನು ಹರಿಯು ಅನುವಾದ ರೂಪದಲ್ಲಿ ಬ್ರಹ್ಮನಿಗೆ ಹೇಳಿದ್ದು. ಇಂತಹ ಪ್ರಸಂಗಗಳು ಉಪನಿಷತ್ತಿನಲ್ಲಿ ಅಲ್ಲಲ್ಲಿ ಅನೇಕ ಸಂದರ್ಭಗಳಲ್ಲಿ ಕಾಣಸಿಗುತ್ತವೆ. ಅವುಗಳಿಗೆಲ್ಲ ಒಂದೇ ರೀತಿ ಸಮಾಧಾನವನ್ನು ಹೀಗೆ ತಿಳಿಯಬೇಕು ಎನ್ನುತ್ತಾರೆ ಆಚಾರ್ಯರು ''ವಿಷ್ಣು ಮೊದಲಾದ ಮಹಾದೇವತೆಗಳು ಯಾವ ಮಂತ್ರಗಳಿಗೆ ಋಷಿಗಳಾಗಿರುವರೋ ಆ ಮಂತ್ರಗಳಲ್ಲಿ ತಮಗಿಂತಲೂ ನೀಚರನ್ನು ತಾವು ಸ್ತೋತ್ರಮಾಡುವಂತೆ ತೋರಿದರೆ ಅಂತಹ ಸ್ತೋತ್ರಗಳನ್ನು ಇತರರ ಅನುವಾದ ಎಂದು ವ್ಯಾಖ್ಯಾನಿಸಬೇಕು''.

## ... ಶಿಕ್ಷೆಯ ಶಿಕ್ಷಣ ...

ಜ್ಞಾನಪಿಪಾಸುವೇ! ನೀನು ನಡೆಸುವ ಅಧ್ಯಯನಕ್ಕೂ ಮೊದಲು ಅವಶ್ಯವಾಗಿ ತಿಳಿಯಬೇಕಾದ ವಿಶೇಷವನ್ನು ಉಪನಿಷತ್ತು ಆರಂಭದಲ್ಲಿಯೇ ನಿರೂಪಿಸುತ್ತದೆ. ಮಂತ್ರಶಬ್ದವೇ ಹೇಳುವಂತೆ ಯಾವುದರ ಅರ್ಥವನ್ನು ತಿಳಿದು ಪಠಿಸುತ್ತೇವೆಯೋ ಅದು ನಮ್ಮನ್ನು ರಕ್ಷಿಸುವಂತಹದ್ದು ಅದುವೇ ನಿಜವಾದ ಮಂತ್ರ. ಇಂತಹ ಅರ್ಥಪ್ರಧಾನವಾಗಿರುವ ಉಪನಿಷನ್ಮಂತ್ರಗಳಲ್ಲಿ ಜ್ಞಾನಪಿಪಾಸುಗಳು ಆಲಸ್ಯವನ್ನು ಹೊಂದದಿರಲಿ ಎಂಬ ಕಾರಣದಿಂದ ಆರಂಭದಲ್ಲಿ ಶಿಕ್ಷೆಯನ್ನು ಹೇಳಲಾಗಿದೆ. ಶಿಕ್ಷೆ ಎಂದರೆ

ವರ್ಣ ಮೊದಲಾದವುಗಳ ಉಚ್ಚಾರಣೆಯು. ವರ್ಣವೆಂದರೆ ಅಕಾರಾದಿವರ್ಣಗಳು. ಸ್ವರಗಳೆಂದರೆ ಉದಾತ್ತಾದಿಗಳು. ಮಾತ್ರಾಗಳೆಂದರೆ ಏಕಮಾತ್ರಾ ಇತ್ಯಾದಿಗಳು. ಬಲ ಎಂದರೆ ವರ್ಣೋಚ್ಚಾರಣೆಗೆ ಬೇಕಾದ ವಿವೃತಾದಿಪ್ರಯತ್ನಗಳು. ಸಾಮವೆಂದರೆ ವರ್ಣಗಳ ಸಂಧಿಭಾಗ. ಸಂತಾನ ಎಂದರೆ ಅನೇಕ ವರ್ಣಗಳನ್ನೊಳಗೊಂಡ ವಾಕ್ಯದಲ್ಲಿರುವ ವರ್ಣಪರಂಪರೆ.

ಇಲ್ಲಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ವರ್ಣಮೊದಲಾದ ಶಬ್ದಗಳಿಗೆ ವಿಷ್ಣುಪರತಯಾ ಅರ್ಥವನ್ನು ಮಾಡುವ ಮೂಲಕ ಭಗವಂತನ ರೂಪಗಳ ಚಿಂತನೆಯನ್ನು ತಿಳಿಸಿರುತ್ತಾರೆ. ಆಚಾರ್ಯರು ನೀಡಿದ ಈ ಅನುಸಂಧಾನವನ್ನು ಸಮರ್ಥಿಸಿಕೊಂಡ ಶ್ರೀವಾದಿರಾಜರು ವರ್ಣಾದಿ ಆರು ಪದಾರ್ಥಗಳು ತನ್ನಿಯಾಮಕ ಭಗವಂತನ ರೂಪಗಳ ಚಿಂತನೆ ಇಲ್ಲದೇ ಕೇವಲ ವರ್ಣಾದಿಗಳ ಉಚ್ಚಾರಣೆ ನಡೆದಲ್ಲಿ ಅದೆಲ್ಲವೂ ವ್ಯರ್ಥ ಎಂಬುದಾಗಿ ಅಭಿಪ್ರಾಯಪಟ್ಟಿರುತ್ತಾರೆ.

**ವರ್ಣ** - ಗುಣಗಳಿಂದ ವರಣೀಯನಾದ,(ವರ್ಣನೀಯನಾದ) ವರ್ಣನಾಮಕನಾದ ಪುರುಷರಲ್ಲಿ ವರ್ಣೋಚ್ಚಾರಣಶಕ್ತಿಪ್ರದನಾದ ಭಗವಂತ ವರ್ಣಶಬ್ದವಾಚ್ಯನು.

**ಸ್ವರ** - ಸ್ವರಮಣನಾದ ಸ್ವರಶಬ್ದವಾಚ್ಯನಾದ ಪುರುಷರಲ್ಲಿದ್ದು ಸ್ವರೋಚ್ಚಾರಣಾದಿ ಶಕ್ತಿಪ್ರದನಾದ ಶ್ರೀಹರಿಯು ಸ್ವರಶಬ್ದವಾಚ್ಯನು.

**ಮಾತ್ರಾ** - ಅಪಮೃತ್ಯುಮೊದಲಾದ ನಾಶಗಳನ್ನು ಪರಿಹರಿಸಿ ಭಕ್ತರನ್ನು ರಕ್ಷಿಸುವ,ಅಥವಾ ಜ್ಞಾನವನ್ನು ನೀಡಿ ರಕ್ಷಿಸುವ ಭಗವಂತನು ಮಾತ್ರಾಶಬ್ದವಾಚ್ಯನು.

**ಬಲ** - ಅನಂತ ಶಕ್ತಿವಿಶಿಷ್ಟನಾದ್ದರಿಂದ ಶ್ರೀಹರಿಯನ್ನು ಬಲ ಎಂದು ಕರೆಯಲಾಗಿದೆ.

**ಸಾಮ** - ತನ್ನ ಎಲ್ಲ ರೂಪಗಳಲ್ಲಿ ಸಮಾನನಾದ್ದರಿಂದ ಭಗವಂತ ಸಾಮಶಬ್ದವಾಚ್ಯನು.

**ಸಂತಾನ** - ಸಕಲದೇಶಕಾಲಗುಣಗಳಲ್ಲಿ ತುಂಬಿಕೊಂಡು ಸರ್ವತ್ರವ್ಯಾಪ್ತನಾದ ವರ್ಣ ಸಂತತಿಯಲ್ಲಿರುವ, ಪುರುಷರಲ್ಲಿದ್ದು ಸಂತಾನೋಚ್ಚಾರಣಕ್ರಿಯಾಪ್ರದನಾದ ಭಗವಂತನು ಸಂತಾನ ಶಬ್ದವಾಚ್ಯನಾಗಿದ್ದಾನೆ.

**ವಿಶೇಷ**- ಬ್ರಹ್ಮಪರವಾಗಿ ಅರ್ಥವಿಲ್ಲದಿದ್ದಲ್ಲಿ ಉಪನಿಷತ್ತುಗಳು ಬ್ರಹ್ಮವಿದ್ಯೆಯಾಗಲಾರವು ಎಂಬ ಅಭಿಪ್ರಾಯದಿಂದ ಆಚಾರ್ಯರು ವರ್ಣ, ಸ್ವರ ಮೊದಲಾದ ಶಬ್ದಗಳಿಗೆ ಬ್ರಹ್ಮಪರವಾಗಿ ಅರ್ಥವನ್ನು ತಿಳಿಸಿರುತ್ತಾರೆ.

**ಸಹ ನೌ ಯಶಃ । ಸಹ ನೌ ಬ್ರಹ್ಮವರ್ಚಸಮ್ ।**

**ಸಂಹಿತೆ** ಹಾಗು ತದ್ಗತಭಗವದುಪಾಸನೆಯ ನಿಮಿತ್ತ ಯಾವ ಯಶಸ್ಸು ಇದೆಯೋ ಆದು ನಮ್ಮಿಬ್ಬರಿಗೂ ಉಂಟಾಗಲಿ.ಮಿತ್ರನನ್ನು ಆರಂಭಿಸಿ ವಾಯುಪರ್ಯಂತವಾದ ಆದೇವ ಸಮೂಹವು ಗುರು-ಶಿಷ್ಯರುಗಳಾದ ನಮಗೆ ವೇದಾಧ್ಯಯನದಿಂದ ಹೊಂದಬೇಕಾದ ಬ್ರಹ್ಮವರ್ಚಸ್ಸನ್ನು ನೀಡಿ ಅನುಗ್ರಹಿಸಲಿ.

ವರ್ಣಾದಿಶೀಕ್ಷಾವಿಷಯದಲ್ಲಿ ತಿಳಿಸಬೇಕಾದ ವಿಷಯಗಳನ್ನು ತಿಳಿಸಿ ಈ ಮುಂದೆ ಲೌಕಿಕ ಮತ್ತು ಅಲೌಕಿಕಪ್ರಯೋಜನಗಳನ್ನು ತಿಳಿಸಲು ಹೊರಟಿದ್ದಾರೆ. ಪೂರ್ವೋತ್ತರವರ್ಣಗಳು ವರ್ಣಗಳ ಸಂಧಿ ಸಂಧಾನಗಳಿಲ್ಲಿ ಪ್ರೇರಕವಾಗಿ ಇರುವ ಭಗವಂತನ ರೂಪವಿಶೇಷಗಳನ್ನು ಈ ಮುಂದಿನ ಐದು ಪ್ರಕರಣಗಳಲ್ಲಿ ವಿಸ್ತಾರವಾಗಿ ಉಪದೇಶಿಸಲಾಗಿದೆ.

**ವಿಶೇಷ-** ಶಂ ನೋ ಮಿತ್ರಃ ಎಂಬುದಾಗಿ ಉಪನಿಷತ್ತಿನ ಆರಂಭದಲ್ಲಿಯೇ ಮಂಗಲವನ್ನು ನಿಬಂಧನೆಮಾಡಲಾಗಿದೆ. ಪುನಃ ಅಥಾತಃ ಸಂಹಿತಾಯಾಃ ಎಂದು ಮಂಗಳವನ್ನು ಆಚರಿಸುತ್ತಿರುವದು ಅನುಚಿತವು ಎಂಬ ಶಂಕೆಗೆ, ವಿದ್ಯೆಗಳು ಅನೇಕ, ಪ್ರತಿಯೊಂದು ವಿದ್ಯೆಯನ್ನು ಆರಂಭಿಸುವಾಗಲೂ ಪ್ರತ್ಯೇಕ ಮಂಗಳಾಚರಣೆಯ ಅವಶ್ಯಕತೆ ಇದೆ ಎನ್ನುವದನ್ನು ಸೂಚಿಸುವದಕ್ಕಾಗಿ ಅಥಾತಃ ಸಂಹಿತಾಯಾಃ ಎನ್ನುವಲ್ಲಿ ಅಥ ಎಂಬುದಾಗಿ ಮತ್ತೆ ಮಂಗಲವನ್ನು ನಿಬಂಧನೆಮಾಡಲಾಗಿದೆ.

ವೇದಾಧ್ಯಯನದ ನಂತರ ವೇದಾರ್ಥವನ್ನು ವಿಚಾರಮಾಡುವ ಪದ್ಧತಿ ಪ್ರಾಚೀನಕಾಲದಿಂದಲೂ ನಡೆದು ಬಂದದ್ದು. ಕಾರಣ ಅಧ್ಯಯನ ಮಾಡುವವನಿಗೆ ಗ್ರಂಥದಲ್ಲಿ ಮೂಡಿಬಂದ ಪದವಿನ್ಯಾಸವು ಮಾತ್ರ ಬುದ್ಧಿಸ್ಥವಾಗಿದ್ದು ಶೀಘ್ರವಾಗಿ ಅರ್ಥಜ್ಞಾನ ಮಾಡಿಕೊಳ್ಳುವಲ್ಲಿ ಸಮರ್ಥವಾಗಿರುವದಿಲ್ಲ. ಆದ್ದರಿಂದ ಸಂಹಿತಾಧ್ಯಯನ ಕಾಲಕ್ಕೆ ಪಠಿಸುವ ಶಬ್ದಗಳಲ್ಲಿಯೇ ಸಂಧಿವಿಭಾಗಮಾಡಿ ಹಿಂದುಮುಂದಿನ ಅಕ್ಷರಗಳನ್ನು 5 ಅಧಿಕರಣಗಳಲ್ಲಿ ಚಿಂತಿಸಿದರೆ ಮುಂದೆ ಅರ್ಥಜ್ಞಾನಮಾಡಿಕೊಳ್ಳುವಾಗ ಪರಬ್ರಹ್ಮಪರ ವಾಗಿ ಅರ್ಥವನ್ನು ತಿಳಿಯುವಾಗ ಸಹಾಯವಾಗುತ್ತದೆ. ಆದಕ್ಕಾಗಿ ಮೊಟ್ಟಮೊದಲು ಸಂಹಿ ತಾಧ್ಯಯನವನ್ನು ಹೇಳಲಾಗಿದೆ.

## ... ಪಂಚಾಧಿಕರಣಗಳಲ್ಲಿ ಸಂಹಿತೋಪಾಸನೆ ...

**ಅಧಿಲೋಕ, ಅಧಿಜ್ಯೋತಿಷ, ಅಧಿವಿದ್ಯ, ಅಧಿಪ್ರಜ, ಅಧ್ಯಾತ್ಮ** ಎಂಬ ಲೋಕಾದಿಪಂಚಕಗಳನ್ನು ಇಲ್ಲಿ ಪ್ರಸ್ತಾಪಿಸಿರುವದರಿಂದ ಇದು ಸಂಹಿತೆ ಎನಿಸಿಕೊಂಡಿರುತ್ತದೆ. ಇಂತಹ ಸಂಹಿತೆಗಳನ್ನು ಹಾಗು ಪರಮಾತ್ಮನನ್ನು ಪ್ರತಿಪಾದಿಸುವ ಕಾರಣದಿಂದ ಇದನ್ನು ಜ್ಞಾನಿಗಳು ಮಹಾಸಂಹಿತೆ ಎಂದು ಕರೆಯುವರು.

| ಮಹಾಸಂಹಿತೆ | ಸ್ಥಾನಗಳು | ಭಗವದ್ರೂಪಗಳು |
|---|---|---|
| 1. ಅಧಿಲೋಕ | ಪೃಥಿವೀ, ದ್ಯು ಮೊದಲಾದ ಲೋಕಗಳು. | ನಾರಾಯಣ |
| 2. ಅಧಿಜ್ಯೋತಿಷ | ಅಗ್ನಿ, ಆದಿತ್ಯಾದಿಗಳು ಜ್ಯೋತಿಷಗಳು. | ವಾಸುದೇವ |
| 3. ಅಧಿವಿದ್ಯ | ಗುರುಶಿಷ್ಯರು. | ಸಂಕರ್ಷಣ |
| 4. ಅಧಿಪ್ರಜ | ಸಂತಾನಕ್ಕೆ ಕಾರಣರಾದ ಮಾತಾಪಿತೃಗಳು | ಪ್ರದ್ಯುಮ್ನ |
| 5. ಅಧ್ಯಾತ್ಮ | ಶರೀರದ ಒಳಗಿರುವ ಇಂದ್ರಿಯಗಳು. | ಅನಿರುದ್ಧ |

## ... ಸಂಹಿತೆ ಮಹಾಸಂಹಿತೆ ಎನಿಸಿದ್ದು ...

ಲೋಕಾದಿ ವರ್ಗಪಂಚಕಗಳಲ್ಲಿ ಪ್ರತ್ಯೇಕವಾಗಿ ನಾರಾಯಣ,ವಾಸುದೇವ,ಸಂಕರ್ಷಣ, ಪ್ರದ್ಯುಮ್ನ,ಅನಿರುದ್ಧಾದಿರೂಪಪಂಚಕಗಳು ಪೂರ್ವರೂಪ, ಉತ್ತರರೂಪ, ಸಂಧಿ, ಸಂಧಾನ ಮೊದಲಾದ ನಾಲ್ಕು ಸಂಹಿತೆಗಳು ಪ್ರತಿಪಾದಿತವಾಗಿವೆ. ಹೀಗೆ ಸಕಲವೇದಗತವಾದ ಸಂಹಿತೆಗಳು ಪರಬ್ರಹ್ಮನ ಮಹಾಮಹಿಮೆಯನ್ನು ಹೇಳುವದರಿಂದ ಈ ಸಂಹಿತೆಯನ್ನು ಮಹಾ ಸಂಹಿತೆ ಎಂದು ಹೇಳಲಾಗಿದೆ.

## ಲೋಕಾದಿಗಳಲ್ಲಿ ಸಂಹಿತೆ ಹಾಗು ತತ್ತನ್ನಿಯಾಮಕ ಭಗವದ್ರೂಪಗಳನ್ನು ತಿಳಿಯುವ ಬಗೆ

| ಸಂಹಿತೆಯ ಪ್ರಬೇಧಗಳು | ಭಗವದ್ರೂಪಗಳು |
|---|---|
| ಪೃಥಿವೀ- | |
| ಪೂರ್ವರೂಪ | ನಾರಾಯಣವಾಸುದೇವ |
| ಉತ್ತರರೂಪ | ನಾರಾಯಣಸಂಕರ್ಷಣ |
| ಸಂಧಿ | ನಾರಾಯಣಪ್ರದ್ಯುಮ್ನ |
| ಸಂಧಾನ | ನಾರಾಯಣಅನಿರುದ್ಧ |

**ಅಗ್ನಿ-**

| | |
|---|---|
| ಪೂರ್ವರೂಪ | ವಾಸುದೇವವಾಸುದೇವ |
| ಉತ್ತರರೂಪ | ವಾಸುದೇವಸಂಕರ್ಷಣ |
| ಸಂಧಿ | ವಾಸುದೇವಪ್ರದ್ಯುಮ್ನ |
| ಸಂಧಾನ | ವಾಸುದೇವಾನಿರುದ್ಧ |

**ಅಧಿವಿದ್ಯೆ-**

| | |
|---|---|
| ಪೂರ್ವರೂಪ | ಸಂಕರ್ಷಣವಾಸುದೇವ |
| ಉತ್ತರರೂಪ | ಸಂಕರ್ಷಣಸಂಕರ್ಷಣ |
| ಸಂಧಿ | ಸಂಕರ್ಷಣಪ್ರದ್ಯುಮ್ನ |
| ಸಂಧಾನ | ಸಂಕರ್ಷಣಾನಿರುದ್ಧ |

**ಅಧಿಪಜೆ-**

| | |
|---|---|
| ಪೂರ್ವರೂಪ | ಪ್ರದ್ಯುಮ್ನವಾಸುದೇವ |
| ಉತ್ತರರೂಪ | ಪ್ರದ್ಯುಮ್ನಸಂಕರ್ಷಣ |
| ಸಂಧಿ | ಪ್ರದ್ಯುಮ್ನಪ್ರದ್ಯುಮ್ನ |
| ಸಂಧಾನ | ಪ್ರದ್ಯುಮ್ನ ಅನಿರುದ್ಧ |

**ಅಧ್ಯಾತ್ಮ-**

| | |
|---|---|
| ಪೂರ್ವರೂಪ | ಅನಿರುದ್ಧವಾಸುದೇವ |
| ಉತ್ತರರೂಪ | ಅನಿರುದ್ಧಸಂಕರ್ಷಣ |
| ಸಂಧಿ | ಅನಿರುದ್ಧಪ್ರದ್ಯುಮ್ನ |
| ಸಂಧಾನ | ಅನಿರುದ್ಧಾನಿರುದ್ಧ |

ಸಂಹಿತೆಯ ಹಿಂದಿನ ಅಕ್ಷರವು ಪೂರ್ವರೂಪವೆಂದು ಮುಂದಿನ ಅಕ್ಷರವು ಉತ್ತರರೂಪವೆಂದು ತಿಳಯಬೇಕು. ಎರಡು ಅಕ್ಷರಗಳ ನಡುವಣ ಛಿದ್ರವೇ ಸಂಧಿ. ಹಿಂದಿನ ಮತ್ತು ಮುಂದಿನ ಅಕ್ಷರಗಳ ಸಂಬಂಧಕಾರಣವಾದ ಪ್ರಯತ್ನ ವಿಶೇಷವೇ ಸಂಧಾನವೆನಿಸುವದು.

ಲೋಕಾದಿಗಳಲ್ಲಿ ಇರುವ ನಾಲ್ಕು ಭಗವದ್ರೂಪಗಳ ಚಿಂತನೆಯನ್ನು ಇಲ್ಲಿ ನಿರೂಪಿಸಲಾಗಿದೆ. ಪೃಥ್ವಿಯಲ್ಲಿರುವ ಪೃಥ್ವಿನಾಮಕವಾದ ಭಗವಂತನ ನಾರಾಯಣ ವಾಸು ದೇವರೂಪವು ಸಂಹಿತೆಯ ಪೂರ್ವವರ್ಣದಲ್ಲಿದ್ದು ಆ ವರ್ಣದಿಂದ ವಾಚ್ಯವಾಗಿದೆ. ದ್ಯುಲೋಕಸ್ಥಿತವಾದ ದ್ಯುನಾಮಕವಾದ ನಾರಾಯಣ-ಸಂಕರ್ಷಣರೂಪವು ಉತ್ತರವರ್ಣ

ಗಳಲ್ಲಿದ್ದು ಆ ವರ್ಣದಿಂದ ವಾಚ್ಯವಾಗಿದೆ. ಆಕಾಶದಲ್ಲಿರುವ ಆಕಾಶನಾಮಕವಾದ ನಾರಾಯಣಪ್ರದ್ಯುಮ್ನ ಎನ್ನುವ ಸಂಧಿಯು ಸನ್ನಿಕರ್ಷಪ್ರತಿಪಾದ್ಯವಾಗಿದೆ. ವಾಯುವಿನಲ್ಲಿರುವ ನಾರಾಯಣಾನಿರುದ್ಧ ಎನ್ನುವ ರೂಪಗಳು ಸಂಧಾನವೆನಿಸಿರುತ್ತವೆ.

ಅಗ್ನಿಯಲ್ಲಿರುವ ಅಗ್ನಿನಾಮಕವಾದ ಭಗವಂತನ ವಾಸುದೇವ ವಾಸುದೇವರೂಪವು ಸಂಹಿತೆಯ ಪೂರ್ವವರ್ಣದಲ್ಲಿದ್ದು ಆ ವರ್ಣದಿಂದ ವಾಚ್ಯವಾಗಿದೆ. ಆದಿತ್ಯನಲ್ಲಿರುವ ಆದಿತ್ಯನಾಮಕವಾದ ಭಗವಂತನ ವಾಸುದೇವಸಂಕರ್ಷಣರೂಪವು ಸಂಹಿತೆಯ ಉತ್ತರ ವರ್ಣಗಳಲ್ಲಿದ್ದು ಆ ವರ್ಣದಿಂದ ವಾಚ್ಯವಾಗಿದೆ. ಆಪ್‌ನಲ್ಲಿರುವ ಆಪ್‌ನಾಮಕಭಗವಂತನ ವಾಸುದೇವ ಪ್ರದ್ಯುಮ್ನರೂಪವು ವರ್ಣಗಳ ಸಂಧಿಯಲ್ಲಿದ್ದು ಸಂಧಿಯಿಂದ ವಾಚ್ಯವಾಗಿದೆ. ವಿದ್ಯುತ್ತಿನ ಸಮೂಹದಲ್ಲಿರುವ ವೈದ್ಯುನ್ನಾಮಕವಾದ ಭಗವಂತನ ವಾಸುದೇವ-ಅನಿರುದ್ಧರೂಪವು ಸಂಧಾನಕ್ರಿಯೆಯಲ್ಲಿದ್ದು ಸಂಧಾನವಾಚ್ಯವಾಗಿದೆ. ಹೀಗೆ ಜ್ಯೋತಿಗಳಲ್ಲಿ ಅಂತರ್ಗತವಾದ ನಾಲ್ಕುರೂಪಗಳುಳ್ಳ ವಾಸುದೇವನು ಪೂರ್ವೋತ್ತರವರ್ಣಾದಿಗಳಲ್ಲಿರುವನೆಂಬುದು ನಿರೂಪಿತವಾಗಿದೆ.

ವಿದ್ಯೆಗೆ ಸಂಬಂಧಿಸಿದ ಸಂಕರ್ಷಣನ ನಾಲ್ಕುರೂಪಗಳು ಸಂಹಿತೆಯ ಪೂರ್ವೋತ್ತರವರ್ಣಾದಿಗಳಲ್ಲಿ ಇರುವ ಬಗೆಯನ್ನು ಇಲ್ಲಿ ನಿರೂಪಿಸಲಾಗಿದೆ. ಆಚಾರ್ಯನಲ್ಲಿರುವ ಆಚಾರ್ಯನಾಮಕವಾದ ಸಂಕರ್ಷಣನ ವಾಸುದೇವರೂಪವು ಸಂಹಿತೆಯ ಪೂರ್ವವರ್ಣದಲ್ಲಿದ್ದು ಆ ವರ್ಣವನ್ನೇ ನಾಮವನ್ನಾಗಿ ಪಡೆದಿದೆ. ಶಿಷ್ಯನಲ್ಲಿರುವ ಅಂತೇವಾಸಿನಾಮಕರಾದ ಸಂಕರ್ಷಣನ ಸಂಕರ್ಷಣರೂಪವು ಸಂಹಿತೆಯ ಉತ್ತರವರ್ಣದಲ್ಲಿದ್ದು ಆ ವರ್ಣದಿಂದ ವಾಚ್ಯವಾಗಿದೆ. ವಿದ್ಯೆಯಲ್ಲಿರುವ ವಿದ್ಯಾನಾಮಕವಾದ ಸಂಕರ್ಷಣನ ಪ್ರದ್ಯುಮ್ನರೂಪವು ವರ್ಣಗಳ ಸಂಧಿಯಲ್ಲಿದ್ದು ಸಂಧಿಯಿಂದ ವಾಚ್ಯವಾಗಿದೆ. ಪ್ರವಚನಕ್ರಿಯೆಯಲ್ಲಿರುವ ಪ್ರವಚನನಾಮಕವಾದ ಸಂಕರ್ಷಣನ ಅನಿರುದ್ಧರೂಪವು ಸಂಧಾನಕ್ರಿಯೆಯಲ್ಲಿದ್ದು ಸಂಧಾನವಾಚ್ಯವಾಗಿದೆ. ಹೀಗೆ ವಿದ್ಯೆಗೆ ಸಂಬಂಧಿಸಿದ ಸಂಕರ್ಷಣನ ನಾಲ್ಕುರೂಪಗಳು ಪೂರ್ವೋತ್ತರ ವರ್ಣಾದಿಗಳಲ್ಲಿ ಇರುವ ಬಗೆಯು ನಿರೂಪಿತವಾಗಿದೆ.

ಪ್ರಜಾಸಂತತಿಗೆ ಸಂಬಂಧಿಸಿದ ಪ್ರದ್ಯುಮ್ನರೂಪಿ ಭಗವಂತನು ನಾಲ್ಕು ರೂಪಗಳಿಂದ ಪೂರ್ವೋತ್ತರ ವರ್ಣಾದಿಗಳಲ್ಲಿ ಇರುವ ಬಗೆಯನ್ನು ಹೀಗೆ ನಿರೂಪಿಸಲಾಗಿದೆ.

ಮಾತೃವಿನಲ್ಲಿರುವ ಮಾತೃನಾಮಕವಾದ ಪ್ರದ್ಯುಮ್ನನ ವಾಸುದೇವ ರೂಪವು ಸಂಹಿತೆಯ ಪೂರ್ವವರ್ಣದಲ್ಲಿಯೂ, ಪಿತೃವಿನಲ್ಲಿರುವ ಪಿತೃನಾಮಕವಾದ ಪ್ರದ್ಯುಮ್ನನ ಸಂಕರ್ಷಣರೂಪವು ಸಂಹಿತೆಯ ಉತ್ತರ ವರ್ಣದಲ್ಲಿಯೂ, ಪ್ರಜೆಯಲ್ಲಿದ್ದು ಪ್ರಜಾಶಬ್ದವಾ

ಚ್ಯವಾದ ಪ್ರದ್ಯುಮ್ನನ ಪ್ರದ್ಯುಮ್ನರೂಪವು ವರ್ಣಗಳ ಸಂಧಿಯಲ್ಲಿಯೂ, ಪ್ರಜನನ ಕ್ರಿಯೆಯಲ್ಲಿದ್ದು ಪ್ರಜನನ ಶಬ್ದವಾಚ್ಯವಾದ ಪ್ರದ್ಯುಮ್ನನ-ಅನಿರುದ್ಧರೂಪವು ಸಂಧಾನಕ್ರಿಯೆಯಲ್ಲಿ ಇದ್ದು ಸಂಧಾನದಿಂದ ವಾಚ್ಯವಾಗಿದೆ. ಹೀಗೆ ಪ್ರಜಾಸಂತತಿಗೆ ಸಂಬಂಧಿಸಿದ ನಾಲ್ಕು ರೂಪಗಳಿಂದ ಪ್ರದ್ಯುಮ್ನನನ್ನು ಪ್ರತಿಪಾದಿಸಲಾಗಿದೆ.

ಶರೀರಸ್ಥನಾದ ಅನಿರುದ್ಧನಾಮಕ ಭಗವಂತನ ರೂಪಗಳ ವಿವಿರಣೆ ಹೀಗಿದೆ. ಮುಕ್ತಿಯೋಗ್ಯರಲ್ಲಿ ಕೆಳದರ್ಜೆಯ ಮನುಷ್ಯರಿಗೆ ಅವರ ಯೋಗ್ಯತೆಗೆ ಅನುಗುಣವಾಗಿ ಸಮೀಚೀನಜ್ಞಾನವನ್ನು ಕೊಡುವ ಮೂಲಕ ಅಧರಾಹನುಶಬ್ದವಾಚ್ಯವಾದ ಅನಿರುದ್ಧನ ವಾಸುದೇವರೂಪವು ಸಂಹಿತೆಯ ಪೂರ್ವವರ್ಣದಲ್ಲಿಯೂ, ಮುಕ್ತಿಯೋಗ್ಯರಲ್ಲಿ ಉತ್ತಮರಾದ ದೇವತೆಗಳಿಗೆ ಅವರ ಯೋಗ್ಯತೆಗೆ ಅನುಗುಣವಾಗಿ ಸಮೀಚೀನಜ್ಞಾನವನ್ನು ಕೊಡುವುದರಿಂದ ಉತ್ತರಾಹನೆಂಬ ಅನಿರುದ್ಧನ ಸಂಕರ್ಷಣರೂಪವು ಸಂಹಿತೆಯ ಉತ್ತರ ವರ್ಣದಲ್ಲಿಯೂ, ವಕ್ಕವಾದ್ದರಿಂದ ವಾಕ್ ಎಂದು ಹೆಸರು ಪಡೆದಿರುವ ವಾಕ್ ಸ್ಥಿತವಾದ ಅನಿರುದ್ಧನ ಪ್ರದ್ಯುಮ್ನರೂಪವು ವರ್ಣಗಳ ಸಂಧಿಯಲ್ಲಿದ್ದು ಸಂಧಿಯಿಂದ ವಾಚ್ಯವಾಗಿದೆ. ಕರೆದೊಯ್ಯುವುದರಿಂದ ಜಿಹ್ವಾಶಬ್ದವಾಚ್ಯವಾದ ಜಿಹ್ವೆಯಲ್ಲಿರುವ ಅನಿರುದ್ಧನ ಅನಿರುದ್ಧರೂಪವು ಸಂಧಾನಕ್ರಿಯೆಯಲ್ಲಿದ್ದು ಸಂಧಾನದಿಂದ ವಾಚ್ಯವಾಗಿದೆ. ಹೀಗೆ ಶರೀರಸ್ಥವಾದ ನಾಲ್ಕು ರೂಪಗಳುಳ್ಳ ಅನಿರುದ್ಧನನ್ನು ಪ್ರತಿಪಾದಿಸುವ ಸಂಹಿತೆಯು ನಿರೂಪಿತವಾಗಿದೆ.

ಹೀಗೆ ಈ ಸಂಹಿತೆಗಳು ಭಗವಂತನ ರೂಪಗಳನ್ನು ಪ್ರತಿಪಾದಿಸುವದರಿಂದ ಇವು ಮಹಾಸಂಹಿತೆಗಳು. ಯಾರು ಈ ಮಹಾಸಂಹಿತೆಗಳನ್ನು ತಿಳಿಯುತ್ತಾರೋ ಅವರು ಮುಮುಕ್ಷುವಾಗಿದ್ದರೆ ವೈಕುಂಠಾದಿಲೋಕವನ್ನು ಪಡೆಯುವರು. ಆ ಲೋಕದಲ್ಲಿ ಸದಾ ಅಭಿವ್ಯಕ್ತವಾಗಿರುವ ಜ್ಞಾನವನ್ನೂ ವೇದಗಳನ್ನೂ ಪರಮಾತ್ಮನ ಅನುಗ್ರಹದಿಂದ ವೃದ್ಧಿಹೊಂದುವ ಸ್ವರೂಪಭೂತತೇಜಸ್ಸನ್ನೂ ಪಡೆಯುವನು. ಮತ್ತು ಅನ್ನಾದಿ ಸರ್ವಭೋಗಗಳನ್ನೂ ಅನುಭವಿಸುವನು. ಲೌಕಿಕಫಲಗಳನ್ನು ಇಚ್ಛಿಸುವವನಾದರೆ ಪಶುಗಳು, ವೇದಾಧ್ಯಯನದಿಂದ ಲಭಿಸುವ ಬ್ರಹ್ಮವರ್ಚಸ್ಸು ಮತ್ತು ಅನ್ನಾದಿಸಕಲಭೋಗಗಳನ್ನೂ ಸ್ವರ್ಗಲೋಕವನ್ನು ಪಡೆಯುವರು.

### ... ಮೇಧಾಪ್ರಾಪ್ತಿಗಾಗಿ ಪ್ರಾರ್ಥನೆ ...

ಸಕಲೈಶ್ವರ್ಯಸಂಪನ್ನನಾದ ಭಗವಂತನು ನಮ್ಮನ್ನು ಮೇಧಾಶಕ್ತಿಯಿಂದ ಬಲಪಡಿಸಲಿ. ಗುರುಕುಲದಲ್ಲಿ ಅಧ್ಯಯನ ಮಾಡುವಾಗ ಶಿಷ್ಯನಾದವನು ತನ್ನ ಪ್ರಯತ್ನದ ಜೊತೆಗೆ ಉತ್ತಮ ಜ್ಞಾನಪ್ರಾಪ್ತಿಗಾಗಿ ಭಗವಂತನ ಪ್ರಾರ್ಥನೆಯನ್ನು ಮಾಡಬೇಕು.

ಗುರುಕುಲದಲ್ಲಿ ನಡೆಸಲಾಗುವ ವೇದಾಧ್ಯಯನವು ಬಹಳ ವಿಶಿಷ್ಟವಾದದ್ದು. ಪ್ರತಿಯೊಬ್ಬ ವಟು ತನ್ನ ಬದುಕಿನ ಕೆಲವು ಮಹತ್ವ ಹಂತಗಳನ್ನು ತಲುಪುವುದಕ್ಕೆ ಬೇಕಾದ ಮಾರ್ಗದರ್ಶನವನ್ನು ಇಲ್ಲಿ ನೀಡಲಾಗುತ್ತದೆ. ಇದು ಪ್ರಾಚೀನಕಾಲದಿಂದಲೂ ನಡೆದು ಬಂದಿದೆ. ವೇದಗಳ ಅಧ್ಯಯನವನ್ನು ಅರ್ಥಸಹಿತವಾಗಿ ಮಾಡಬೇಕು. ಅದನ್ನು ಇಲ್ಲಿ ಪ್ರಾರ್ಥಿಸಲಾಗಿದೆ. ಈ ನನ್ನ ಶರೀರವು ಜ್ಞಾನಾರ್ಜನೆಗೆ ಸಾಧನವಾಗಲಿ. ನಾನು ಕೇವಲ ಮೇಧಾವಿಯಾಗುವ ಮಾತ್ರಕ್ಕೆ ಸಾಲದು. ಆಧಿವ್ಯಾಧಿಗಳಿಂದ ದುರ್ಬಲವಾದ ನನ್ನ ಶರೀರವು ಜ್ಞಾನವನ್ನು ಸ್ಥಿರವಾಗಿ ಹಿಡಿದಿಟ್ಟು ಕೊಳ್ಳುವಲ್ಲಿ ಸಮರ್ಥವಾಗಿರುವದಿಲ್ಲ ಅನ್ನುವದಕ್ಕಾಗಿ ನನ್ನ ಶರೀರವು ಜ್ಞಾನಾನುಕೂಲವಾಗಲಿ ಎನ್ನುವ ಪ್ರಾರ್ಥನೆಯನ್ನು ಇಲ್ಲಿ ಸಲ್ಲಿಸಲಾಗಿದೆ.

ನುಡಿಯುವ ನಾಲಿಗೆ ನುಡಿ ನೀಡಿದ ಭಗವಂತನನ್ನು ನಿರಂತರ ಗುಣಗಾನ ಮಾಡುವಂತಾಗಲಿ. ಆಲಿಸುವ ಕಿವಿಗಳು ಕೇಶವನ ಮಹಿಮೆಯನ್ನು ಕೇಳುವಂತಾಗಲಿ. ಆರ್ಥಿಕಸಂಕಟತಲೆದೂರಿ ಮಧ್ಯದಲ್ಲಿ ಅಧ್ಯಯನ ನಿಂತು ಹೋಗಬಹುದು. ಆದರಿಂದ ಮನಸ್ಸು ಗಲಿಬಿಲಿಗೊಂಡು ನನ್ನ ಜ್ಞಾನಾರ್ಜನೆಗೆ ಅಡಚಣೆಯೂ ಆಗಬಹುದು. ಅದಕ್ಕಾಗಿ ಅರ್ಥಬೇಕು. ಅರ್ಥದಿಂದ ಸಮೃದ್ಧಿ. ಸಮದ್ಧಿ ಎಂದರೆ ಅನ್ನವಸ್ತ್ರಾದಿಗಳಸಮೃದ್ಧಿ. ಅನ್ನವಸ್ತ್ರವೊದಲಾದಸವೃದ್ಧಿಯಿಂದ ಅಧ್ಯಯನ ಮತ್ತೆ ನಿರ್ವಿಘ್ನವಾಗಿ ಮುಂದೊರಿಯುವಂತೆ ಆಗಲಿ ಎನ್ನುವ ಪ್ರಾರ್ಥನೆಯು ಇಲ್ಲಿ ಇದೆ.ಪ್ರವಾಹರೂಪದಲ್ಲಿ ಹರಿದು ಬಂದ ನೀರು ಪಾತ್ರೆಯಲ್ಲಿ ಸೇರಿ ಸದ್ವಿನಿಯೋಗವಾಗುವಂತೆ, ಮಾಸಗಳು ಉರುಳಿ ಸಂವತ್ಸರದಲ್ಲಿ ಸೇರುವಂತೆ ನಿನ್ನಿಂದ ಹರಿದು ಬಂದ ಜ್ಞಾನಾಮೃತವು ನಾಲ್ಕಾರು ಶಿಷ್ಯರ ಮನೆಮನಗಳನ್ನು ತಲುಪವಂತಾಗಲಿ. ಉತ್ತಮಶಿಷ್ಯಸಂಪತ್ತು ನಮಗೆ ದೊರೆಯುವಂತಾಗಲಿ.

ಇಲ್ಲಿ ಮೊದಲು ಮೇಧಾವನ್ನು ದಯಪಾಲಿಸು ಎಂದು ಕೇಳಿ ನಂತರ ಸಂಪತ್ತನ್ನು ಕೊಡು ಎಂದು ಪ್ರಾರ್ಥಿಸಲಾಗಿದೆ. ಮೇಧಾ ಎಂದರೆ ವಿದ್ಯಾಧಾರಣಶಕ್ತಿ. ಯಾವನು ವಿದ್ಯಾವಂತನೋ ಅವನಿಗೆ ಸಂಪತ್ತಿನ ಆವಶ್ಯಕತೆ ಇದೆ. ಏಕೆಂದರೆ ಅವನು ಅಧ್ಯಯನ ಮಾಡಿರುವ ವೇದಗಳಲ್ಲಿ ಹೇಳಿರುವ ಕರ್ಮಗಳ ಆಚರಣೆಗೆ ಅರ್ಥವು ಅಪೇಕ್ಷಿತ. ಆದ್ದರಿಂದ ಮೊದಲು ಮೇಧಾಪ್ರಾರ್ಥನೆಯನ್ನು ನಡೆಸಲಾಗಿದೆ.

ನಮ್ಮ ಶಾಸ್ತ್ರವು ಆಧ್ಯಾತ್ಮಿಕ ಉನ್ನತಿಯ ಜೊತೆಗೆ ಬೌದ್ಧಿಕ ಸಮೃದ್ಧಿಗೂ ಸ್ಥಾನಮಾನವನ್ನು ನೀಡಿದೆ. ಜೀವನದಲ್ಲಿ ಬಂದೊದಗುವ ಸುಖಶಾಂತಿಗಳು ಅಂತಿಮವಾಗಿ ಭಗವಂತನ ದರ್ಶನದೆಡೆಗೆ ಕರೆದೊಯ್ಯುವಂತಾಗಬೇಕು. ಇಂತಹ ಆಧ್ಯಾತ್ಮಿಕ ಹಾಗು ಬೌದ್ಧಿಕ

ಸಮೃದ್ಧಿಯನ್ನು ಪಡೆದ ನನ್ನಿಂದ ನಿರಂತರವಾಗಿ ಜ್ಞಾನ ಪ್ರಸಾರಕಾರ್ಯವು ನಡೆಯಲು ಶಮದಮಾದಿಸಂಪನ್ನರಾದ ಭಗವನ್ನಿಷ್ಠರಾದ ಎಲ್ಲ ವಟುಗಳು ನನ್ನನ್ನು ಉದ್ದೇಶಿಸಿ ಬರುವಂತಾಗಲಿ .ಶಿಷ್ಯರ ಎದುರಿನಲ್ಲಿ ಈ ಗುರುಗಳು ಚೆನ್ನಾಗಿ ಪಾಠಮಾಡಬಲ್ಲರು ಎನ್ನುವ ಹೆಗ್ಗಳಿಕೆಯ ಪಾತ್ರತೆ ನನ್ನಲ್ಲಿ ಬರಲಿ. ಸುಖಶಾಂತಿಗಳ ವಿಷಯದಲ್ಲಿ ಇನ್ನೊಬ್ಬರಿಗಿಂತ ನಾನೇನು ಕಡಿಮೆಯಿಲ್ಲ ಎನ್ನುವಷ್ಟು ಸುಖ ನನ್ನಲ್ಲಿ ಹರಿದು ಬರಲಿ. ಕಾರಣ ಅಧ್ಯಯನಕ್ಕೆ ಪ್ರತಿಬಂಧಕವಾಗದ ಸುಖಪ್ರಾಪ್ತಿಯಿಂದ ಮನಸ್ಸಿನ ಕ್ಷೋಭೆಗಳೆಲ್ಲ ದೂರ ಜರಿದು ವಿಘ್ನಗಳಿಂದ ನಿರ್ಮುಕ್ತನಾಗಿ ಪಾಠಪ್ರವಚನ ಮಾಡುವಂತಾಗಲಿ.

ವೇದಾಧ್ಯಯನಮಾಡಲು ಬಯಸುವವನು ಯಥಾರ್ಥಜ್ಞಾನ, ಸತ್ಯಮಾತನಾಡುವಿಕೆ, ಸತ್ಕರ್ಮಗಳ ಅನುಷ್ಠಾನ, ಹಾಗು ಇಂದ್ರಿಯನಿಗ್ರಹ ಇವುಗಳನ್ನು ಮೊದಲು ಸಂಪಾದಿಸಬೇಕು. ತನ್ನ ಬುದ್ಧಿಯು ಭಗವನ್ನಿಷ್ಠವಾಗಿರುವಂತೆ ಮಾಡಿಕೊಳ್ಳಬೇಕು. ಅಗ್ನಿಗಳಲ್ಲಿ ಭಗವಂತನನ್ನು ಪೂಜಿಸುತ್ತ ಅಗ್ನಿಹೋತ್ರಮೊದಲಾದ ಕರ್ಮಗಳನ್ನು ಆಚರಿಸುವದು. ಅತಿಥಿಗಳನ್ನು ಪೂಜಿಸುವದು ಮಾನವ ಧರ್ಮಗಳನ್ನು ಪರಿಪಾಲಿಸುವದು, ಶಿಷ್ಯರು ಅಥವಾ ಪುತ್ರರನ್ನು ರಕ್ಷಿಸುವದು ಅಂದರೆ ಶಿಷ್ಯರು ಅಥವಾ ಪುತ್ರರಿಗೆ ಉಪನಯನಾದಿ ಸಂಸ್ಕಾರಗಳನ್ನು ಕೊಡಿಸುವದು. ಹೀಗೆ ತನ್ನ ವರ್ಣಾಶ್ರಮಕ್ಕೆ ವಿಹಿತವಾದ ಎಲ್ಲ ಕರ್ಮಗಳನ್ನು ಮಾಡುವಾಗ ಅವುಗಳ ಜೊತೆಗೆ ವೇದಾಧ್ಯಯನ ವೇದಪ್ರವಚನಗಳನ್ನು ರೂಢಿಸಿಕೊಳ್ಳಬೇಕು.

**ಮಂತ್ರೋ ಮಂತ್ರಾರ್ಥವಚನಂ ಅನ್ಯಸ್ಯ ಸ್ವಾತ್ಮನೋಪಿ ವಾ ।**
**ಸರ್ವಕರ್ಮಸು ಕರ್ತವ್ಯೌ ಸರ್ವಕರ್ಮಾತ್ಮಕೌ ಯತಃ ॥ ಇತಿ ಕರ್ಮತತ್ತ್ವೇ**

ವೇದಾಧ್ಯಯನ ವೇದಾರ್ಥಪ್ರವಚನಗಳು ಎಲ್ಲಾ ಕಾಲಗಳಲ್ಲಿ ನಡೆಯಬೇಕು. ಎನ್ನುವದನ್ನು ಆಚಾರ್ಯರು ಉದಾಹರಿಸಿದ ಕರ್ಮತತ್ತ್ವ ಎಂಬ ಗ್ರಂಥವು ಬಹಳ ಸ್ಪಷ್ಟವಾಗಿ ತಿಳಿಸುತ್ತದೆ. ಒಬ್ಬ ವೇದಾಧಿಕಾರಿಯು ವೇದಾಧ್ಯಯನವನ್ನು ಮಾಡುವದು. ಇತರರಿಗಾಗಲಿ ತನ್ನನ್ನು ಕುರಿತಾಗಲಿ ವೇದಾರ್ಥವನ್ನು ಪ್ರವಚನ ಮಾಡುವದು ಇವುಗಳನ್ನು ಇನ್ನುಳಿದ ಯಾವದೇ ಕರ್ಮಗಳನ್ನು ಮಾಡುವಾಗಲೂ ಜೊತೆಗೆ ಮಾಡತಕ್ಕದ್ದು. ಏಕೆಂದರೆ ಇವು ಎಲ್ಲ ಕರ್ಮಗಳಿಗಿಂತಲೂ ಪ್ರಧಾನವಾಗಿರುತ್ತವೆ.

ರಾತೀಥರನೆಂಬ ಋಷಿಯು ತಾನು ಸತ್ಯದಲ್ಲಿಯೇ ರತನಾಗಿ ಜ್ಞಾನಪೂರ್ವಕ ಪ್ರವಚನ ಹಾಗು ಕರ್ಮಾಚರಣೆಯು ಶ್ರೇಯಸ್ಸಾಧನವೆಂದು ಹೇಳುತ್ತಾನೆ. ತಪೋನಿಷ್ಠನಾದ ಪೌರುಶಿಷ್ಟಿಯು ಧ್ಯಾನಾದಿರೂಪವಾದ ತಪಸ್ಸು ಶ್ರೇಯಸ್ಸಾಧನವೆಂದು ಹೇಳುವನು.

ವೇದಾಧ್ಯಯನ ವೇದಪ್ರವಚನಗಳನ್ನು ಶ್ರೇಯಸ್ಸಾಧನವೆಂದು ಮುದ್ಗಲಪುತ್ರನಾದ ನಾಕನು ಹೇಳಿರುತ್ತಾನೆ. ಈ ಮೂವರು ಋಷಿಗಳ ಆಶಯಗಳನ್ನು ಸರಿಯಾಗಿ ಅರಿತಾಗ ಸ್ವಾಧ್ಯಾಯಪ್ರವಚನಗಳೇ ತಪಸ್ಸು ಸತ್ಯಗಳೆಂದು ಮನವರಿಕೆಯಾಗುತ್ತದೆ.

ವೇದಾಧ್ಯಯನಪ್ರವಚನಗಳನ್ನು ನಡೆಸುವ ಅಧಿಕಾರಿಯು ಅವುಗಳಿಂದ ಹೊಂದುವ ಫಲವನ್ನು ಒಂದು ಕಥೆಯ ಮೂಲಕ ಇಲ್ಲಿ ವರ್ಣಿಸಲಾಗಿದೆ. ವೈವಸ್ವತ ಮನ್ವಂತರದಲ್ಲಿ ಜನಿಸಿದ ತ್ರಿಶಂಕು ಎಂಬ ರಾಜನು ವೇದಾಧ್ಯಯನದಿಂದ ಅಪರೋಕ್ಷಜ್ಞಾನವನ್ನು ಪಡೆದು ಭಗವದನುಗ್ರಹದಿಂದ ಸ್ವಯೋಗ್ಯ ಮುಕ್ತಿಯನ್ನು ಹೊಂದಿ ಆನಂದವನ್ನು ಅನುಭವಿಸಿದನು. ಹೀಗೆ ನಾನು ವೇದಾಧ್ಯಯನದಿಂದ ಮೋಕ್ಷವನ್ನು ಪಡೆದವನೆಂದು ತನ್ನ ಕೀರ್ತಿಯನ್ನು ಹೇಳಿಕೊಳ್ಳುವ ಮೂಲಕ ವೇದ ಪ್ರವಚನದಿಂದ ಉಂಟಾಗುವ ಫಲವನ್ನು ಹೀಗೆ ನಿರೂಪಿಸಿದ್ದಾನೆ. ನನ್ನ ಸಂಸಾರವೆಂಬ ವೃಕ್ಷವು ಕತ್ತರಿಸಿ ಬಿತ್ತು. ಕೀರ್ತಿಯೂ ಪರ್ವತದೆತ್ತರಕ್ಕೆ ವಿಸ್ತಾರವಾಗಿ ಹರಡಿತು. ಸರ್ವೋತ್ಕೃಷ್ಟನಾದ ವಿಷ್ಣುವಿನಿಂದ ಪವಿತ್ರಮೂರ್ತಿಯಾಗಿ ನಿಂತು ಸೂರ್ಯಾಂತರ್ಗತ ಭಗವಂತನ ಅನುಗ್ರಹದಿಂದ ಮುಕ್ತಿಯನ್ನು ಪಡೆದೆನು. ಇವೆಲ್ಲವು ವೇದಾಧ್ಯಯನ ವೇದಪ್ರವಚನಗಳ ಫಲವು ಎಂದು ಹೇಳಿದ್ದಾನೆ.

## ... ಶಿಷ್ಯಾನುಶಾಸನ ...

ಅಧ್ಯಯನವನ್ನು ಪೂರ್ಣಗೊಳಿಸಿದ ಅಂತೇವಾಸಿಗಳಿಗೆ ಉಪನಿಷತ್ತು ನೀಡುವ ಸಂದೇಶವು ಬಹಳ ಹೃದಯಂಗಮವಾಗಿದೆ. ಸತ್ಯ ನುಡಿಯುವ ಸ್ವಭಾವ ನಿನ್ನದಾಗಲಿ. ಲೋಕಾಧಾರಕನಾದ ಭಗವಂತ ನಿರಂತರ ನಿನ್ನ ಸ್ಮೃತಿಪಟಲಕ್ಕೆ ಬರಲಿ. ದೇವ ದೇವನ ಅಣತಿಗನುಗುಣವಾಗಿ ಧರ್ಮದ ಚೌಕಟ್ಟಿನಲ್ಲಿ ನಿನ್ನ ಬದುಕು ಸಾರ್ಥಕವಾಗುವಂತಾಗಲಿ. ಅಧ್ಯಯನ ಮಾಡಿದ ವೇದಾದಿಶಾಸ್ತ್ರಗಳನ್ನು ಮರೆಯಬೇಡ. ವೇದಶಾಸ್ತ್ರಾಧ್ಯಯನದ ನಂತರ ಆಚಾರ್ಯರಿಗೆ ಇಷ್ಟವಾದದ್ದನ್ನು ಗುರುದಕ್ಷಿಣೆಯಾಗಿ ನೀಡು. ಗ್ರಹಸ್ಥಾಶ್ರಮವನ್ನು ಸ್ವೀಕರಿಸಿ ಪ್ರಜಾಸಂತತಿಯನ್ನು ಮುಂದು ವರಿಸು. ಉತ್ತಮವಾದ ಐಶ್ವರ್ಯ ಬಂದರೂ ಸ್ವಾಧ್ಯಾಯಪ್ರವಚನಗಳನ್ನು ಮರೆಯಬೇಡ. ದೇವ-ಪಿತೃಕಾರ್ಯಗಳನ್ನು ಬಿಡಬೇಡ. ತಂದೆ-ತಾಯಿಗಳನ್ನು ದೇವರಂತೆ ಕಾಣು.ಅತಿಥಿ-ಆಚಾರ್ಯರನ್ನು ಗೌರವದಿಂದ ಪೂಜಿಸು. ಶ್ರದ್ಧೆಯಿಂದ ದಾನಾದಿಗಳನ್ನು ಮಾಡು. ಧರ್ಮದಲ್ಲಿ ಸಂದೇಹ ಬಂದಾಗ ರಾಗದ್ವೇಷರಹಿತರಾದ ಸಜ್ಜನರ ವರ್ತನೆಯನ್ನು ನೋಡಿ ಕರ್ತವ್ಯವನ್ನು ಅರಿತುಕೊ. ವೇದ ವೇದಾಂತಗಳ ಆದೇಶವಿದು. ಈ ಮೂಲಕ ಭಗವಂತ ನೀಡಿದ ಸಂದೇಶವಿದು. ಇದುವೇ ವೇದಗಳಿಂದ ಮೂಡಿಬಂದ ಶಿಕ್ಷಣ. ಇದುವೇ ನಿನ್ನ ಬದುಕಿಗೆ ಮಾರ್ಗದರ್ಶನ ಆಲಸ್ಯವಿಲ್ಲದೇ ಹೀಗೆ ಇರಬೇಕಾದದ್ದು ನಿನ್ನ ಆದ್ಯಕರ್ತವ್ಯ.

ಸಮೃದ್ಧಿಯನ್ನು ಪಡೆದ ನನ್ನಿಂದ ನಿರಂತರವಾಗಿ ಜ್ಞಾನ ಪ್ರಸಾರಕಾರ್ಯವು ನಡೆಯಲು ಶಮದಮಾದಿಸಂಪನ್ನರಾದ ಭಗವನ್ನಿಷ್ಠರಾದ ಎಲ್ಲ ವಟುಗಳು ನನ್ನನ್ನು ಉದ್ದೇಶಿಸಿ ಬರುವಂತಾಗಲಿ .ಶಿಷ್ಯರ ಎದುರಿನಲ್ಲಿ ಈ ಗುರುಗಳು ಚೆನ್ನಾಗಿ ಪಾಠಮಾಡಬಲ್ಲರು ಎನ್ನುವ ಹೆಗ್ಗಳಿಕೆಯ ಪಾತ್ರತೆ ನನ್ನಲ್ಲಿ ಬರಲಿ. ಸುಖಶಾಂತಿಗಳ ವಿಷಯದಲ್ಲಿ ಇನ್ನೊಬ್ಬರಿಗಿಂತ ನಾನೇನು ಕಡಿಮೆಯಿಲ್ಲ ಎನ್ನುವಷ್ಟು ಸುಖ ನನ್ನಲ್ಲಿ ಹರಿದು ಬರಲಿ. ಕಾರಣ ಅಧ್ಯಯನಕ್ಕೆ ಪ್ರತಿಬಂಧಕವಾಗದ ಸುಖಪ್ರಾಪ್ತಿಯಿಂದ ಮನಸ್ಸಿನ ಕ್ಷೋಭೆಗಳೆಲ್ಲ ದೂರ ಜರಿದು ವಿಘ್ನಗಳಿಂದ ನಿರ್ಮುಕ್ತನಾಗಿ ಪಾಠಪ್ರವಚನ ಮಾಡುವಂತಾಗಲಿ.

ವೇದಾಧ್ಯಯನಮಾಡಲು ಬಯಸುವವನು ಯಥಾರ್ಥಜ್ಞಾನ, ಸತ್ಯಮಾತನಾಡುವಿಕೆ, ಸತ್ಕರ್ಮಗಳ ಅನುಷ್ಠಾನ, ಹಾಗು ಇಂದ್ರಿಯನಿಗ್ರಹ ಇವುಗಳನ್ನು ಮೊದಲು ಸಂಪಾದಿಸಬೇಕು. ತನ್ನ ಬುದ್ಧಿಯು ಭಗವನ್ನಿಷ್ಠವಾಗಿರುವಂತೆ ಮಾಡಿಕೊಳ್ಳಬೇಕು. ಅಗ್ನಿಗಳಲ್ಲಿ ಭಗವಂತನನ್ನು ಪೂಜಿಸುತ್ತ ಅಗ್ನಿಹೋತ್ರಮೊದಲಾದ ಕರ್ಮಗಳನ್ನು ಆಚರಿಸುವದು. ಅತಿಥಿಗಳನ್ನು ಪೂಜಿಸುವದು ಮಾನವ ಧರ್ಮಗಳನ್ನು ಪರಿಪಾಲಿಸುವದು, ಶಿಷ್ಯರು ಅಥವಾ ಪುತ್ರರನ್ನು ರಕ್ಷಿಸುವದು ಅಂದರೆ ಶಿಷ್ಯರು ಅಥವಾ ಪುತ್ರರಿಗೆ ಉಪನಯನಾದಿ ಸಂಸ್ಕಾರಗಳನ್ನು ಕೊಡಿಸುವದು. ಹೀಗೆ ತನ್ನ ವರ್ಣಾಶ್ರಮಕ್ಕೆ ವಿಹಿತವಾದ ಎಲ್ಲ ಕರ್ಮಗಳನ್ನು ಮಾಡುವಾಗ ಅವುಗಳ ಜೊತೆಗೆ ವೇದಾಧ್ಯಯನ ವೇದಪ್ರವಚನಗಳನ್ನು ರೂಢಿಸಿಕೊಳ್ಳಬೇಕು.

**ಮಂತ್ರೋ ಮಂತ್ರಾರ್ಥವಚನಂ ಅನ್ಯಸ್ಯ ಸ್ವಾತ್ಮನೋಪಿ ವಾ ।**
**ಸರ್ವಕರ್ಮಸು ಕರ್ತವ್ಯೌ ಸರ್ವಕರ್ಮಾತ್ಮಕೌ ಯತಃ ॥ ಇತಿ ಕರ್ಮತತ್ತ್ವೇ**

ವೇದಾಧ್ಯಯನ ವೇದಾರ್ಥಪ್ರವಚನಗಳು ಎಲ್ಲಾ ಕಾಲಗಳಲ್ಲಿ ನಡೆಯಬೇಕು. ಎನ್ನುವದನ್ನು ಆಚಾರ್ಯರು ಉದಾಹರಿಸಿದ ಕರ್ಮತತ್ತ್ವ ಎಂಬ ಗ್ರಂಥವು ಬಹಳ ಸ್ಪಷ್ಟವಾಗಿ ತಿಳಿಸುತ್ತದೆ. ಒಬ್ಬ ವೇದಾಧಿಕಾರಿಯು ವೇದಾಧ್ಯಯನವನ್ನು ಮಾಡುವದು. ಇತರರಿಗಾಗಲಿ ತನ್ನನ್ನು ಕುರಿತಾಗಲಿ ವೇದಾರ್ಥವನ್ನು ಪ್ರವಚನ ಮಾಡುವದು ಇವುಗಳನ್ನು ಇನ್ನುಳಿದ ಯಾವದೇ ಕರ್ಮಗಳನ್ನು ಮಾಡುವಾಗಲೂ ಜೊತೆಗೆ ಮಾಡತಕ್ಕದ್ದು ಏಕೆಂದರೆ ಇವು ಎಲ್ಲ ಕರ್ಮಗಳಿಗಿಂತಲೂ ಪ್ರಧಾನವಾಗಿರುತ್ತವೆ.

ರಾತೀಥರನೆಂಬ ಋಷಿಯು ತಾನು ಸತ್ಯದಲ್ಲಿಯೇ ರತನಾಗಿ ಜ್ಞಾನಪೂರ್ವಕ ಪ್ರವಚನ ಹಾಗು ಕರ್ಮಾಚರಣೆಯು ಶ್ರೇಯಸ್ಸಾಧನವೆಂದು ಹೇಳುತ್ತಾನೆ. ತಪೋನಿಷ್ಠನಾದ ಪೌರುಶಿಷ್ಟಿಯು ಧ್ಯಾನಾದಿರೂಪವಾದ ತಪಸ್ಸು ಶ್ರೇಯಸ್ಸಾಧನವೆಂದು ಹೇಳುವನು.

ವೇದಾಧ್ಯಯನ ವೇದಪ್ರವಚನಗಳನ್ನು ಶ್ರೇಯಸ್ಸಾಧನವೆಂದು ಮುದ್ಗಲಪುತ್ರನಾದ ನಾಕನು ಹೇಳಿರುತ್ತಾನೆ. ಈ ಮೂವರು ಋಷಿಗಳ ಆಶಯಗಳನ್ನು ಸರಿಯಾಗಿ ಅರಿತಾಗ ಸ್ವಾಧ್ಯಾಯಪ್ರವಚನಗಳೇ ತಪಸ್ಸು ಸತ್ಯಗಳೆಂದು ಮನವರಿಕೆಯಾಗುತ್ತದೆ.

ವೇದಾಧ್ಯಯನಪ್ರವಚನಗಳನ್ನು ನಡೆಸುವ ಅಧಿಕಾರಿಯು ಅವುಗಳಿಂದ ಹೊಂದುವ ಫಲವನ್ನು ಒಂದು ಕಥೆಯ ಮೂಲಕ ಇಲ್ಲಿ ವರ್ಣಿಸಲಾಗಿದೆ. ವೈವಸ್ವತ ಮನ್ವಂತರದಲ್ಲಿ ಜನಿಸಿದ ತ್ರಿಶಂಕು ಎಂಬ ರಾಜನು ವೇದಾಧ್ಯಯನದಿಂದ ಅಪರೋಕ್ಷಜ್ಞಾನವನ್ನು ಪಡೆದು ಭಗವದನುಗ್ರಹದಿಂದ ಸ್ವಯೋಗ್ಯ ಮುಕ್ತಿಯನ್ನು ಹೊಂದಿ ಆನಂದವನ್ನು ಅನುಭವಿಸಿದನು. ಹೀಗೆ ನಾನು ವೇದಾಧ್ಯಯನದಿಂದ ಮೋಕ್ಷವನ್ನು ಪಡೆದವನೆಂದು ತನ್ನ ಕೀರ್ತಿಯನ್ನು ಹೇಳಿಕೊಳ್ಳುವ ಮೂಲಕ ವೇದ ಪ್ರವಚನದಿಂದ ಉಂಟಾಗುವ ಫಲವನ್ನು ಹೀಗೆ ನಿರೂಪಿಸಿದ್ದಾನೆ. ನನ್ನ ಸಂಸಾರವೆಂಬ ವೃಕ್ಷವು ಕತ್ತರಿಸಿ ಬಿತ್ತು. ಕೀರ್ತಿಯೂ ಪರ್ವತದೆತ್ತರಕ್ಕೆ ವಿಸ್ತಾರವಾಗಿ ಹರಡಿತು. ಸರ್ವೋತ್ಕೃಷ್ಟನಾದ ವಿಷ್ಣುವಿನಿಂದ ಪವಿತ್ರಮೂರ್ತಿಯಾಗಿ ನಿಂತು ಸೂರ್ಯಾಂತರ್ಗತ ಭಗವಂತನ ಅನುಗ್ರಹದಿಂದ ಮುಕ್ತಿಯನ್ನು ಪಡೆದೆನು. ಇವೆಲ್ಲವು ವೇದಾಧ್ಯಯನ ವೇದಪ್ರವಚನಗಳ ಫಲವು ಎಂದು ಹೇಳಿದ್ದಾನೆ.

## ... ಶಿಷ್ಯಾನುಶಾಸನ ...

ಅಧ್ಯಯನವನ್ನು ಪೂರ್ಣಗೊಳಿಸಿದ ಅಂತೇವಾಸಿಗಳಿಗೆ ಉಪನಿಷತ್ತು ನೀಡುವ ಸಂದೇಶವು ಬಹಳ ಹೃದಯಂಗಮವಾಗಿದೆ. ಸತ್ಯ ನುಡಿಯುವ ಸ್ವಭಾವ ನಿನ್ನದಾಗಲಿ. ಲೋಕಾಧಾರಕನಾದ ಭಗವಂತ ನಿರಂತರ ನಿನ್ನ ಸ್ಮೃತಿಪಟಲಕ್ಕೆ ಬರಲಿ. ದೇವ ದೇವನ ಅಣತಿಗನುಗುಣವಾಗಿ ಧರ್ಮದ ಚೌಕಟ್ಟಿನಲ್ಲಿ ನಿನ್ನ ಬದುಕು ಸಾರ್ಥಕವಾಗುವಂತಾಗಲಿ. ಅಧ್ಯಯನ ಮಾಡಿದ ವೇದಾದಿಶಾಸ್ತ್ರಗಳನ್ನು ಮರೆಯಬೇಡ. ವೇದಶಾಸ್ತ್ರಾಧ್ಯಯನದ ನಂತರ ಆಚಾರ್ಯರಿಗೆ ಇಷ್ಟವಾದದ್ದನ್ನು ಗುರುದಕ್ಷಿಣೆಯಾಗಿ ನೀಡು. ಗ್ರಹಸ್ಥಾಶ್ರಮವನ್ನು ಸ್ವೀಕರಿಸಿ ಪ್ರಜಾಸಂತತಿಯನ್ನು ಮುಂದು ವರಿಸು. ಉತ್ತಮವಾದ ಐಶ್ವರ್ಯ ಬಂದರೂ ಸ್ವಾಧ್ಯಾಯಪ್ರವಚನಗಳನ್ನು ಮರೆಯಬೇಡ. ದೇವ-ಪಿತೃಕಾರ್ಯಗಳನ್ನು ಬಿಡಬೇಡ. ತಂದೆ-ತಾಯಿಗಳನ್ನು ದೇವರಂತೆ ಕಾಣು.ಅತಿಥಿ-ಆಚಾರ್ಯರನ್ನು ಗೌರವದಿಂದ ಪೂಜಿಸು. ಶ್ರದ್ಧೆಯಿಂದ ದಾನಾದಿಗಳನ್ನು ಮಾಡು. ಧರ್ಮದಲ್ಲಿ ಸಂದೇಹ ಬಂದಾಗ ರಾಗದ್ವೇಷರಹಿತರಾದ ಸಜ್ಜನರ ವರ್ತನೆಯನ್ನು ನೋಡಿ ಕರ್ತವ್ಯವನ್ನು ಅರಿತುಕೊ. ವೇದ ವೇದಾಂತಗಳ ಆದೇಶವಿದು. ಈ ಮೂಲಕ ಭಗವಂತ ನೀಡಿದ ಸಂದೇಶವಿದು. ಇದುವೇ ವೇದಗಳಿಂದ ಮೂಡಿಬಂದ ಶಿಕ್ಷಣ. ಇದುವೇ ನಿನ್ನ ಬದುಕಿಗೆ ಮಾರ್ಗದರ್ಶನ ಆಲಸ್ಯವಿಲ್ಲದೇ ಹೀಗೆ ಇರಬೇಕಾದದ್ದು ನಿನ್ನ ಆದ್ಯಕರ್ತವ್ಯ.

## ಅಥ ಬ್ರಹ್ಮವಲ್ಲೀ

**ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿ ನಾವಧೀತಮಸ್ತು ಮಾ ವಿದ್ವಿಷಾವಹೈ । ಓಂ ಶಾಂತಿಃ ಶಾಂತಿಃ ಶಾಂತಿಃ ।।1।।**

ಪರಬ್ರಹ್ಮನು ಗುರುಶಿಷ್ಯರಾದ ನಮ್ಮನ್ನು ಜ್ಞಾನದಾನಾದಿಗಳಿಂದ ರಕ್ಷಣೆಮಾಡಲಿ. ನಾವಿಬ್ಬರು ಜೊತೆಗೂಡಿ ಸುಖವನ್ನು ಭೋಗಮಾಡುವಂತೆ ಆಗಲಿ. ಪರಬ್ರಹ್ಮ ಪ್ರಾಪ್ತಿಗೆ ಕಾರಣವಾಗುವ ಕರ್ಮಗಳನ್ನು ನಮ್ಮಿಂದ ಮಾಡಿಸಲಿ. ನಾವು ಮಾಡಿದ ಅಧ್ಯಯನವು ಪರಬ್ರಹ್ಮವಿಷಯಕವಾಗಲಿ. ಅದ್ವೇಷ್ಯರ ಜೊತೆಗೆ ದ್ವೇಷಮಾಡದಿರುವದು ಭಗವತ್ಪ್ರಸಾದಕ್ಕೆ ಕಾರಣ. ಅಂಥವರ ಜೊತೆಗೆ ನಾವು ಸರ್ವಥಾ ದ್ವೇಷಮಾಡುವಂತೆ ಆಗಬಾರದು. ಜ್ಞಾನಾದಿಗುಣಪೂರ್ಣನಾದ ಪರಮಾತ್ಮನು ನಮಗೆ ದೊರಕಲಿ. ಈ ವಿಷಯ ಮೂರು ಕಾಲದಲ್ಲಿ ನಿತ್ಯವೆಂದು ತಿಳಿಸುವದಕ್ಕಾಗಿ ಮೂರು ಬಾರಿ ಹೇಳಿರುತ್ತಾರೆ.

### ... ಪರಬ್ರಹ್ಮನ ಲಕ್ಷಣಗಳು ...

ಪರಬ್ರಹ್ಮನನ್ನು ಹೊಂದುವದಕ್ಕೆ ಮೊದಲು ಬ್ರಹ್ಮನನ್ನು ತಿಳಿಯಬೇಕು. ಯಾವನು ಬ್ರಹ್ಮನನ್ನು ತಿಳಿಯುವನೋ ಅವನು ಬ್ರಹ್ಮನನ್ನು ಹೊಂದುತ್ತಾನೆ. ಬ್ರಹ್ಮನನ್ನು ತಿಳಿಯುವದು ಹೇಗೆ ? ಎನ್ನುವ ಸಂದೇಹವನ್ನು ಈ ಮುಂದಿನ ಮಂತ್ರವು ಹೀಗೆ ಪರಿಹರಿಸುತ್ತದೆ.

ಪರಬ್ರಹ್ಮನು ಸತ್ಯ. ಅಂದರೆ ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನು. ಸ್ವ-ಪರಗತ ಸಮಸ್ತವಿಷಯಗಳ ಸಮಾನ್ಯ-ವಿಶೇಷಜ್ಞಾನ ಇದ್ದವನು. ದೇಶ-ಕಾಲ-ಗುಣಗಳ ಮಿತಿ ಇಲ್ಲದವನು.

ಯಾವನು ಹೃದಯಗುಹೆಯೊಳಗಡಗಿರುವ ಬ್ರಹ್ಮನನ್ನು ತಿಳಿಯುವನೋ ಅವನು ಚತುರ್ಮುಖ ಮತ್ತು ಪರಬ್ರಹ್ಮರ ಅಧೀನನಾಗಿ ಮುಕ್ತಿಯಲ್ಲಿ ಸ್ವಯೋಗ್ಯಭೋಗಗಳನ್ನು ಹೊಂದುವನು. ದುಃಖಾದಿಗಳನ್ನಲ್ಲ

### ... ಆಕಾಶಾದಿಗಳ ಉತ್ಪತ್ತಿ ...

ಭಗವಂತನನ್ನು ಸತ್ಯ ಎಂದು ಹೇಳಲಾಯಿತು. ಇದರ ವಿವರಣೆ ಹೀಗಿದೆ. ಸತ್ ಎಂದರೆ ಜನ್ಮ ಎಂದರ್ಥ. ಸತ್ ಎಂದರೆ ಅಸ್ತಿತ್ವ ಸ್ಥಿತಿ. ಮತ್ತು ನಾಶ ಎಂದೂ ಅರ್ಥಗಳಿವೆ. ಇವುಗಳನ್ನು ಯ-ಯಾಪಯತಿ  ತಂದು ಕೊಡುವವನು ಸತ್ಯ. ಎಂದು ಹೇಳಿ ಆ ಮಾತಿನ ವಿವರಣೆಗಾಗಿ  ಆತ್ಮನಃ ಆಕಾಶಃ ಸಂಭೂತಃ ಎನ್ನುವ ಮುಂದಿನ ಮಂತ್ರವು ಪ್ರವೃತ್ತವಾಗಿರುತ್ತದೆ.

**ಆತ್ಮನ ಆಕಾಶಸ್ಸಂಭೂತಃ**

ಪರಮಾತ್ಮನಿಂದ ಭೂತಾಕಾಶ,ಭೂತಾಕಾಶಾಭಿಮಾನಿದೇವತೆ,ಆದೇವತೆಯದೇಹ ಮತ್ತು ಆದೇಹದಲ್ಲಿ ಅಂತರ್ಗತನಾದ ಭಗವಂತ. ಹೀಗೆ ಆಕಾಶವು ನಾಲ್ಕುವಿಧವಾಗಿ ಜನ್ಮವನ್ನು ಪಡೆದುಕೊಳ್ಳುತ್ತದೆ.

**ಆಕಾಶಾದ್ವಾಯುಃ**

ಭೂತಾಕಾಶದಿಂದ ಭೂತವಾಯು,ತದಭಿಮಾನಿದೇವತೆ,ಆ ದೇವತೆಯ ದೇಹ ಮತ್ತು ಆದೇಹದಲ್ಲಿ ಅಂತರ್ಗತನಾದ ಭಗವಂತ. ಹೀಗೆ ವಾಯುವು ನಾಲ್ಕುವಿಧವಾಗಿ ಜನ್ಮವನ್ನು ಪಡೆದುಕೊಳ್ಳುತ್ತದೆ.

**ವಾಯೋರಗ್ನಿಃ**

ವಾಯುವಿನಿಂದ ಅಗ್ನಿ.ಅಗ್ನ್ಯಭಿಮಾನಿದೇವತೆ,ಆ ದೇವತೆಯ ದೇಹ ಮತ್ತು ಆದೇಹದಲ್ಲಿ ಅಂತರ್ಗತನಾದ ಭಗವಂತ. ಹೀಗೆ ಅಗ್ನಿಯು ನಾಲ್ಕು ವಿಧವಾಗಿ ಜನ್ಮವನ್ನು ಪಡೆದುಕೊಳ್ಳುತ್ತದೆ.

**ಅಗ್ನೇರಾಪಃ**

ಅಗ್ನಿಯಿಂದ ನೀರು.ಅಪಭಿಮಾನಿದೇವತೆ,ಆ ದೇವತೆಯ ದೇಹ ಮತ್ತು ಆ ದೇಹದಲ್ಲಿ ಅಂತರ್ಗತನಾದ ಭಗವಂತ. ಹೀಗೆ ನೀರು ನಾಲ್ಕು ವಿಧವಾಗಿ ಜನ್ಮವನ್ನು ಪಡೆದುಕೊಳ್ಳುತ್ತದೆ.

**ಅದ್ಭ್ಯಃ ಪೃಥಿವೀ**

ನೀರಿನಿಂದ ಪೃಥಿವೀ.ಪೃಥಿವೀ ಅಭಿಮಾನಿದೇವತೆ,ಆ ದೇವತೆಯ ದೇಹ ಮತ್ತು ಆ ದೇಹದಲ್ಲಿ ಅಂತರ್ಗತನಾದ ಭಗವಂತ. ಹೀಗೆ ಪೃಥಿವಿಯು ನಾಲ್ಕು ವಿಧವಾಗಿ ಜನ್ಮವನ್ನು ಪಡೆದುಕೊಳ್ಳುತ್ತದೆ.

**ಪೃಥಿವ್ಯಾಃ ಓಷಧಯಃ**

ಪೃಥಿವಿಯಿಂದ ಔಷಧಿಗಳು. ಔಷಧಾಭಿಮಾನಿದೇವತೆ,ಆ ದೇವತೆಯ ದೇಹ ಮತ್ತು ಆ ದೇಹದಲ್ಲಿ ಅಂತರ್ಗತನಾದ ಭಗವಂತ. ಹೀಗೆ ಔಷಧವು ನಾಲ್ಕು ವಿಧವಾಗಿ ಜನ್ಮವನ್ನು ಪಡೆದುಕೊಳ್ಳುತ್ತದೆ.

**ಓಷಧೀಭ್ಯೋಽನ್ನಮ್**

ಔಷಧಿಗಳಿಂದ ಅನ್ನವು.ಅನ್ನಾಭಿಮಾನಿದೇವತೆ,ಆ ದೇವತೆಯ ದೇಹ ಮತ್ತು ಆ ದೇಹದಲ್ಲಿ ಅಂತರ್ಗತನಾದ ಭಗವಂತ. ಹೀಗೆ ಅನ್ನವು ನಾಲ್ಕು ವಿಧವಾಗಿ ಜನ್ಮವನ್ನು ಪಡೆದುಕೊಳ್ಳುತ್ತದೆ.

**ಅನ್ನಾತ್ ಪುರುಷಃ**

ಆ ಅನ್ನದಿಂದ ಪುರುಷನ ದೇಹ. ದೇಹಾಭಿಮಾನಿ ಜೀವ. ತದಂತರ್ಗತನಾದ ಶ್ರೀಹರಿ ಹೀಗೆ ಪುರುಷನು ಮೂರು ವಿಧವಾಗಿ ಜನ್ಮವನ್ನು ಪಡೆದು ಕೊಳ್ಳುತ್ತಾನೆ.

ಬ್ರಹ್ಮಪ್ರಾಪ್ತಿಯನ್ನು ಬಯಸುವವನು ತಿಳಿಯಬೇಕಾದ ಸತ್ಯತ್ವಾದಿ ಲಕ್ಷಣಗಳಿಂದ ಕೂಡಿದ ಆ ಭಗವಂತನಿಂದ ಭೂತಾಕಾಶವು ಜನಿಸಿತು.ಆಕಾಶದಿಂದ ವಾಯು. ವಾಯುವಿನಿಂದ ಅಗ್ನಿ. ಅಗ್ನಿಯಿಂದ ನೀರು. ನೀರಿನಿಂದ ಪೃಥಿವೀ ಜನಿಸಿತು. ಪೃಥಿವೀಯಿಂದ ಓಷಧಿಗಳು. ಓಷಧಿಗಳಿಂದ ಅನ್ನವು. ಅನ್ನದಿಂದ ಪುರುಷರು ಹುಟ್ಟಿದರು.

**ವಿಶೇಷ-** ಭೂತಾಕಾಶ,ಭೂತಾಕಾಶದ ಅಭಿಮಾನಿದೇವತೆ,ಆ ದೇವತೆಯ ದೇಹ ಮತ್ತು ಈ ಮೂರರಲ್ಲಿ ಅಂತರ್ಗತನಾದ ಭಗವಂತ ಹೀಗೆ ನಾಲ್ಕು ವಿಧವಾದ ಆಕಾಶದ ಉತ್ಪತ್ತಿಯಾಯಿತು ಎಂದು ಅರ್ಥ.ಹೀಗೆ ವಾಯು ಮೊದಲಾದ ತತ್ತ್ವಗಳ ವಿಷಯದಲ್ಲಿಯೂ ತಿಳಿಯಬೇಕು. ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಷಯವೆಂದರೆ ಚತುರ್ವಿಧ ಆಕಾಶವು ಪರಬ್ರಹ್ಮನಿಂದ ಜನಿಸಿದೆ ಎಂದು ತಿಳಿಯುವಾಗ ಹೇಗೆ ತಿಳಿಯುವದು. ಆಯಾ ವಸ್ತುವಿನ ಸ್ವರೂಪಕ್ಕನುಗುಣವಾಗಿ ಜನನವು ಬೇರೆ ಬೇರೆ ಆಗಿರುತ್ತದೆ. ಭೂತಾಕಾಶ ಮತ್ತು ದೇವತೆಗಳ ದೇಹ ಇವುಗಳಿಗಿರುವ ಜನ್ಮ ಪರಿಣಾಮರೂಪವಾದದ್ದು. ಅಭಿಮಾನಿದೇವತೆಗಳಿಗೆ ಅಭಿಮಾನದ ಉತ್ಪತ್ತಿಯೇ ಜನ್ಮ. ಅಲ್ಲಿರುವ ಭಗವಂತನ ರೂಪದ ಉತ್ಪತ್ತಿ ಎಂದರೆ ಪ್ರಾದುರ್ಭಾವ. ಹೀಗೆಯೇ ಎಲ್ಲ ತತ್ತ್ವಗಳ ಸೃಷ್ಟಿಯ ವಿಷಯದಲ್ಲಿ ವ್ಯವಸ್ಥೆ ಇರುತ್ತದೆ.

ಸತ್ಯತ್ವಾದಿಲಕ್ಷಣೋಪೇತನಾದ ಭಗವಂತನಿಂದ ಭೂತಾಕಾಶ, ತದಭಿಮಾನಿದೇವತೆ ಹಾಗು ಆ ದೇವತೆಯ ದೇಹ. ಮತ್ತು ಆ ಮೂವರಲ್ಲಿ ಅಂತರ್ಗತನಾದ ಶ್ರೀಹರಿ ಹೀಗೆ ನಾಲ್ಕು ವಿಧವಾದ ಆಕಾಶದ ಉತ್ಪತ್ತಿ. ಇದೇ ರೀತಿಯಾಗಿ ಆಕಾಶದಿಂದ ಚತುರ್ವಿಧ ಭೂತವಾಯು, ವಾಯುವಿನಿಂದ ಚತುರ್ವಿಧ ಅಗ್ನಿ, ಅಗ್ನಿಯಿಂದ ಚತುರ್ವಿಧ ಜಲ, ಜಲದಿಂದ ಚತುರ್ವಿಧ ಪೃಥ್ವಿ. ಪೃಥ್ವಿಯಿಂದ ಔಷಧಿ. ಔಷಧಿಯಿಂದ ಚತುರ್ವಿಧ ಅನ್ನ. ಆ ಅನ್ನದಿಂದ ಪುರುಷನ ದೇಹ. ದೇಹಾಭಿಮಾನಿ ಜೀವ. ತದಂತರ್ಗತನಾದ ಶ್ರೀಹರಿ ಈ ಮೂವರು ಜನಿಸಿದರು ಎಂದು ಅರ್ಥ.

ಸರ್ವಭೂತಗಳಿಗೆ ಕಾರಣನು ಆಕಾಶಾದಿ ಶಬ್ದವಾಚ್ಯನು ಅನ್ನವಿಕಾರವೆನಿಸಿದ ದೇಹದಲ್ಲಿ ಪುರುಷ ಎಂಬ ಹೆಸರಿನಿಂದ ಇರುವ ಅನಿರುದ್ಧರೂಪಿ ಭಗವಂತನು ಎಲ್ಲ ಭೂತಗಳಿಗೆ ಆಶ್ರಯನಾಗಿ ಕೊನೆಗೆ ಒಂದು ದಿನ ಸಮಸ್ತಭೂತಗಳನ್ನು ನಾಶಗೊಳಿಸುವ ಕಾರಣದಿಂದ ಅನ್ನರಸಮಯ ಎನಿಸಿರುತ್ತಾನೆ.

ಈ ಅನಿರುದ್ಧನಿಗೆ ಅನ್ನಮಯಕೋಶದ ಮಸ್ತಕವೇ ಶಿರಸ್ಸಾಗಿದೆ. ಕೋಶದ ಬಲಭುಜವೇ ಅನಿರುದ್ಧನ ಬಲಭುಜವು. ಈ ದೇಹದ ವಾಮಬಾಹುವೇ ಅನಿರುದ್ಧನ ವಾಮಬಾಹು. ದೇಹದ ಮಧ್ಯವೇ ಅನಿರುದ್ಧನ ಮಧ್ಯದೇಹವಾಗಿರುವದು. ಜೀವದೇಹದ ಪಾದಗಳೇ ಅನಿರುದ್ಧನ ಪಾದ.

**ವಿಶೇಷ-** 'ತಸ್ಯೇದಮೇವ ಶಿರಃ' ಎನ್ನುವ ವಾಕ್ಯವು ಅನ್ನಮಯಕೋಶದ ಶಿರಸ್ಸೇ ಅನ್ನರಸಮಯನ ಶಿರಸ್ಸು ಎಂದು ಹೇಳುತ್ತದೆ. ಇದು ಹೇಗೆ ? ಅನ್ನಮಯನ ಶಿರಸ್ಸು ಶರೀರದ ಶಿರಸ್ಸಿನಲ್ಲಿ ಇದೆ. ಎಂದು ಹೇಳಬೇಕೆ ಹೊರತು ಅದೇ ಇದು ಎಂದು ಹೇಗೆ ಹೇಳುವದು?

ಇದಕ್ಕೆ ಹೀಗೆ ಸಮಾಧಾನವನ್ನು ತಿಳಿಯಬಹುದು. ವಸ್ತ್ರದಿಂದ ಆವೃತವಾದ ಮೊಣಕಾಲನ್ನು ಇದು ಮೊಣಕಾಲು ಎಂದು ವ್ಯವಹರಿಸುವಂತೆ ಅನಿರುದ್ಧನ ಶಿರಸ್ಸನ್ನು ಆವರಿಸಿದ ಶರೀರದ ಶಿರಸ್ಸು ಅನಿರುದ್ಧನ ಶಿರಸ್ಸು ಎಂದು ಔಪಚಾರಿಕವಾಗಿ ವ್ಯವಹರಿಸಲಾಗಿದೆ. ಹೀಗೆ ಮುಂದೆ ಬರುವ ಅಯಂ ದಕ್ಷಿಣಃ ಪಕ್ಷಃ ಇತ್ಯಾದಿಮಾತುಗಳನ್ನು ತಿಳಿಯಬೇಕು.

**ಅನ್ನ ನಾಮಾ ಚಾನ್ನಸಂಸ್ಥಃ ಶರೀರೇಷು ಚ ಸಂಸ್ಥಿತಃ ।**
**ಅತ್ತೃತ್ವಾತ್ ಸರ್ವಲೋಕಾನಾಮನ್ನಮಿತ್ಯುಚ್ಯತೇ ಹರಿಃ ।**
**ಉಪಜೀವ್ಯಶ್ಚ ಭೂತಾನಾಮಿತಿ ಚಾನ್ನಂ ಜನಾರ್ದನಃ ॥**

ಪೃಥಿವಿಯನ್ನು ಆಶ್ರಯಿಸಿರುವ ಸಕಲ ಪ್ರಜೆಗಳು ಅನ್ನರಸಮಯನಾಮಕನಾದ ಅನಿರುದ್ಧನಿಂದಲೇ ಜನ್ಮ-ಸ್ಥೇಮ-ಲಯಗಳನ್ನು ಪಡೆಯುತ್ತಾರೆ. ಅನಿರುದ್ಧನು ಎಲ್ಲ ಜೀವರಗಿಂತ ಉತ್ತಮನು ಆದ್ದರಿಂದ ಅವನನ್ನು ಸಂಸಾರಬಂಧನದಲ್ಲಿ ನೊಂದು ಬೆಂದು ಬೆಂಡಾದ ಜೀವರಿಗೆ ಆಶ್ರಯನೆಂದು ಹೇಳಲಾಗಿದೆ. ಯಾರು ಅನ್ನರಸಮಯನಾಮಕನಾದ ಅನಿರುದ್ಧನನ್ನು ಗುಣಪೂರ್ಣನೆಂದು ಉಪದೇಶಮಾಡುವರೋ ಅವರು ಅನ್ನರಸಮಯನನ್ನು ಹೊಂದುವರು.

## ... ಅನ್ನಮಯನಲ್ಲಿ ಪ್ರಾಣಮಯ...

ಅನ್ನಮಯಕೋಶದಲ್ಲಿ ಪ್ರಾಣಮಯಕೋಶ ಇದೆ. ಅನ್ನಮಯನೊಳಗೆ ಪ್ರಾಣಮಯನಿದ್ದಾನೆ. ಅಂದರೆ ಅನ್ನಮಯನಾದ ಅನಿರುದ್ಧನೊಳಗೆ ಪ್ರಾಣಮಯ ಶಬ್ದವಾಚ್ಯನಾದ ಪ್ರದ್ಯುಮ್ನರೂಪಿ ಭಗವಂತ ವಾಯುವಿಕಾರವಾದ ಪ್ರಾಣಮಯಕೋಶದಲ್ಲಿ ಇರುವನು. ಅನ್ನಮಯಕೋಶಸ್ಥನಾದ ಅನಿರುದ್ದನು ಪ್ರದ್ಯುಮ್ನನಿಂದ ಸ್ವಲ್ಪವೂ ಅವಕಾಶವಿಲ್ಲದಂತೆ ವ್ಯಾಪಿಸಿ ಇರುವನು. ಪ್ರಾಣಮಯಕೋಶಸ್ಥನಾದ ಪ್ರಾಣನಾಮಕನಾದ ಪ್ರಾಣಮಯಶಬ್ದವಾಚ್ಯನಾದ ಪ್ರದ್ಯುಮ್ನನು ಪುರುಷಾಕಾರನಾಗಿರುವನು. ಪ್ರದ್ಯುಮ್ನನ ಪುರುಷಾಕಾರವನ್ನು ಅನುಸರಿಸಿ ಅನ್ನಮಯಕೋಶಸ್ಥನಾದ ಅನಿರುದ್ಧನೂ ಪುರುಷಾಕಾರವನ್ನು ಹೊಂದಿರುತ್ತಾನೆ. ಪ್ರತಿಯೊಬ್ಬ ಜೀವರ ಯೋಗ್ಯತೆಗೆ ಅನುಗುಣವಾಗಿ ಫಲವನ್ನು ನೀಡುತ್ತಾನೆ. ಆದ್ದರಿಂದ ಪ್ರಾಣ ಎಂದೆನಿಸುವನು. ಈ ಪ್ರದ್ಯುಮ್ನನ ಶಿರಸ್ಸು ಪ್ರಾಣನಲ್ಲಿದೆ ಎನ್ನುವದಕ್ಕಾಗಿಯೂ ಇವನನ್ನು ಪ್ರಾಣ ಎಂದು ಹೇಳಲಾಗಿದೆ. ಪ್ರದ್ಯುಮ್ನನ ದಕ್ಷಿಣಬಾಹು ವ್ಯಾನನಲ್ಲಿದ್ದು ಪ್ರಜೆಗಳು ನಡೆಸುವ ಕ್ರಿಯೆಗಳಲ್ಲಿ ಪ್ರೇರಕನಾಗಿ ಇರುವವನು ಆದ್ದರಿಂದ ವ್ಯಾನ ಎಂದೂ ಹೇಳಲಾಗಿದೆ. ಇವನ ವಾಮಬಾಹು ಅಪಾನದಲ್ಲಿದ್ದು ಭಕ್ತರ ಎಲ್ಲ ತರಹದ ದೋಷಗಳನ್ನು ಕಳೆಯುತ್ತದೆ ಆದ್ದರಿಂದ ಅಪಾನ ಎಂದು ಕರೆಯಲಾಗಿದೆ. ಉದಾನದಲ್ಲಿ ಪ್ರದ್ಯುಮ್ನನ ಮಧ್ಯದೇಹ ಅಡಗಿದ್ದು ಎಲ್ಲ ವಸ್ತುಗಳಿಗೆ ಅವಕಾಶಪ್ರದನಾದ್ದರಿಂದ ಆಕಾಶನಾಮಕ ಎಂದು ಸಮಾನನಲ್ಲಿ ಪ್ರದ್ಯುಮ್ನನ ಪಾದಗಳು ಇದ್ದು ಅವು ಎಲ್ಲವನ್ನು ಧರಿಸಿವೆ ಅನ್ನುವದಕ್ಕಾಗಿ ಪೃಥಿವಿ ಎಂದು ಕರೆಯಲಾಗಿದೆ.

## ...ಪ್ರದ್ಯುಮ್ನನಿಂದ ಪ್ರವೃತ್ತಿ...

ಪ್ರಾಣಮಯ ಕೋಶದಲ್ಲಿ ಪ್ರಾಣಮಯನಾಮಕನಾಗಿ ಇರುವ ಪ್ರದ್ಯುಮ್ನನು ಸಮಸ್ತಜಗತ್ತಿಗೆ ಪ್ರವೃತ್ತಿಯನ್ನು ನೀಡುವನು ಎನ್ನುವ ವಿಷಯವನ್ನು ಉಪನಿಷತ್ತು ಹೀಗೆ ಹೇಳುತ್ತದೆ.

ಪ್ರತಿಯೊಬ್ಬ ಮನುಷ್ಯನು ಇಷ್ಟಾರ್ಥಗಳನ್ನು ಹೊಂದುವದಕ್ಕಾಗಿ ನಾನಾವಿಧವಾದ ಪ್ರಯತ್ನಗಳನ್ನು ಮಾಡುತ್ತಾನೆ. ಈ ಉಪನಿಷತ್ತು ಹೇಳುವಂತೆ ದೇವತೆಗಳು ಮನುಷ್ಯರು ಪಶುಗಳು ಇವರೆಲ್ಲರೂ ಸಕಲ ಇಷ್ಟಾರ್ಥಗಳನ್ನು ಹೊಂದುವದು ಇತರ ಅನಿಷ್ಟಗಳಿಂದ ನಿವೃತ್ತರಾಗುವದು ಈ ಪ್ರಾಣಮಯನ ಪ್ರೇರಣೆಯಿಂದ. ಎಲ್ಲರ ಬದುಕಿಗೆ ಕಾರಣನು ಅನ್ನುವದಕ್ಕಾಗಿ ಅವನನ್ನು ಸರ್ವಾಯುಷಿ ಎಂದು ಎಂದು ಕರೆಯಲಾಗಿದೆ. ಯಾರು ಇವನನ್ನು ಪೂರ್ಣ ಎಂದು ಉಪಾಸನೆ ಮಾಡುವರೋ ಅವರು ಮೋಕ್ಷವನ್ನು

ಹೊಂದುತ್ತಾರೆ. ಈ ಪ್ರದ್ಯುಮ್ನನಿಗೆ ಅನಿರುದ್ಧನೇ ಶರೀರ. ಶರೀರದಂತಿರುವ ಅನಿರುದ್ಧನಿಗೆ ಪ್ರದ್ಯುಮ್ನನು ಆತ್ಮನಂತಿರುವನು.

## ...ಮನೋಮಯ ಸಂಕರ್ಷಣ...

ಮನೋಮಯಕೋಶಸ್ಥನಾದ ಜ್ಞಾನಪ್ರಚುರನಾದ ಕಾರಣ ಮನೋಮಯ ನಾಮಕನಾದ ಸಂಕರ್ಷಣನು ಪ್ರದ್ಯುಮ್ನನೊಳಗೆ ವ್ಯಾಪಿಸಿ ಇರುವನು. ಆ ಮನೋಮಯನಿಗೆ ಪುರುಷಾಕಾರವಿದೆ. ಇವನ ಪುರುಷಾಕಾರದಂತೆ ಪ್ರಾಣಮಯನ ಪುರುಷಾಕಾರವು ಇದೆ.

ಸಂಕರ್ಷಣನ ಶಿರಸ್ಸು ಯಜ್ಞದಲ್ಲಿ ನೀಡುವ ಭಾಗವನ್ನು ಸ್ವೀಕರಿಸುವದರ ಜೊತೆಗೆ ಯಜುರ್ವೇದಪ್ರತಿಪಾದ್ಯವೂ ಆಗಿದೆ. ದಕ್ಷಿಣ ಭುಜವು ಋಗ್ವೇದ ಪ್ರತಿಪಾದ್ಯವಾಗುವದರ ಜೊತೆಗೆ ಭಕ್ತರು ಮಾಡುವ ಅರ್ಚನೆಗಳನ್ನು ಸ್ವೀಕರಿಸುತ್ತದೆ. ಆದ್ದರಿಂದ ಅದು ಋಕ್ಎಂಬ ಹೆಸರನ್ನು ಪಡೆದುಕೊಂಡಿರುತ್ತದೆ. ಸಾಮವೇದ ಪ್ರತಿಪಾದ್ಯನಾದ ಸಂಕರ್ಷಣನ ವಾಮನಭುಜವು ಸಾಮ ಶಬ್ದವಾಚ್ಯವಾಗಿದೆ. ಇವನ ಮಧ್ಯದೇಹವು ಅತ್ಯಂತ ವಿಸ್ತೃತವಾಗಿರುವದರ ಜೊತೆಗೆ ಬಹಳ ವಿಸ್ತೃತವಾದ ಪಂಚರಾತ್ರಾದಿ ಆಗಮಗಳಿಂದ ಪ್ರತಿಪಾದ್ಯವಾಗಿದೆ ಆದ್ದರಿಂದ ಇದನ್ನು ಆದೇಶ ಎಂದು ಕರೆಯಲಾಗಿದೆ. ಅವನಪಾದಗಳು ಪಾತಾಳದಲ್ಲಿರುವ ಪ್ರಾಣಿಗಳನ್ನು ಪ್ರವರ್ತಿಸುವಂತೆ ಮಾಡುತ್ತವೆ. ಆದ್ದರಿಂದ ಅಥರ್ವನಾಮಕವೂ ಪ್ರಧಾನದೇವತೆಗಳಲ್ಲಿ ಶ್ರೇಷ್ಠರಾದ ಕಾರಣ ಅಂಗಿರಸ ಎಂದು ಹಾಗು ಅಥರ್ವಣವೇದ ಪ್ರತಿಪಾದ್ಯರು ಆದ್ದರಿಂದ ಅಥರ್ವಾಂಗಿರಸರು ಎಂದು ಕರೆಯಲಾಗಿದೆ.

ಯಜುರಾದಿ ವೇದಗಳು ಅವನ ಒಂದೊಂದು ಅವಯವಗಳನ್ನು ಪ್ರತಿಪಾದಿಸಬಲ್ಲವೇ ಹೊರತು ಸಂಪೂರ್ಣವಾಗಿ ತಿಳಿಸಲು ಸಮರ್ಥವಾಗಿಲ್ಲ ಎನ್ನುವ ಪೂರ್ವೋಕ್ತವಿಷಯವನ್ನು ಈ ಮುಂದಿನ ಮಂತ್ರಗಳು ಹೀಗೆ ನಿರೂಪಿಸುತ್ತವೆ. ಮನೋಮಯನಾದ ಸಂಕರ್ಷಣನನ್ನು ವೇದಗಳು ಪೂರ್ಣವಾಗಿ ಪ್ರತಿಪಾದಿಸಲಾರದೆ ಹಿಂತಿರುಗುತ್ತವೆ.

ಋಗ್ವೇದಾದಿಗಳು ಭಗವಂತನ ಒಂದೊಂದು ಅವಯವವನ್ನು ಪ್ರತಿಪಾದಿಸಬಲ್ಲವೇ ಹೊರತು ಸಂಪೂರ್ಣವಾಗಿ ಅವನ ಸ್ವರೂಪವನ್ನು ತಿಳಿಸಲಾರವು. ಎನ್ನುವದೇ ಈ ಮನೋಮಯಪ್ರಕರಣದಲ್ಲಿ ತಿಳಿದು ಬರುವ ವಿಷಯವಾಗಿರುತ್ತದೆ.

ಮನೋಮಯಸಂಕರ್ಷಣನ ಒಳಗೆ ವಿಜ್ಞಾನಮಯನಾದ ವಾಸುದೇವನು ನೆಲೆಸಿದ್ದಾನೆ. ಆ ವಾಸುದೇವನ ಶಿರಸ್ಸು ಶ್ರುತಿಗಳನ್ನು ಧರಿಸಿರುವದರಿಂದ ಶ್ರದ್ಧೆಯೆಂದೆನಿಸಿವೆ. ಅವನ ದಕ್ಷಿಣಬಾಹುವು ಸಜ್ಜನರಿಗೆ ನಿಯಾಮಕವಾಗಿರುವದರಿಂದ ಸತ್ಯನಾಮಕವಾಗಿದೆ.

ಮಧ್ಯದೇಹವು ಸರ್ವಲೋಕಗಳಿಂದ ಕೂಡಿರುವದರಿಂದ ಯೋಗ ಎನಿಸಿದೆ. ಎಲ್ಲಾ ಕಾಲದಲ್ಲಿ ಪೂಜನೀಯವಾದ್ದರಿಂದ ಅವನ ಪಾದಗಳನ್ನು ಮಹಸ್ಸೆಂದು ಕರೆಯಲಾಗಿದೆ.

ಆನಂದಮಯಪ್ರಕರಣದಲ್ಲಿ ಅನಂತ ಪದೋಕ್ತವಾದ ಪರಬ್ರಹ್ಮನ ಅನಂತತ್ವವನ್ನು ತಿಳಿಸಲು ಹೇತುವಾದ ಪೂರ್ಣಾನಂದತ್ವವನ್ನು ವಿಶದಪಡಿಸಲಾಗಿದೆ. ವಿಜ್ಞಾನಮಯವಾಸುದೇವನಲ್ಲಿ ಆನಂದಸ್ವರೂಪನಾದ ನಾರಾಯಣನು ನೆಲೆಸಿದ್ದಾನೆ. ಮುಕ್ತರಿಂದ ಹೊಂದಲು ಯೋಗ್ಯವಾದುದರಿಂದ ಅವನ ಶಿರಸ್ಸನ್ನು ಪ್ರಿಯ ಎಂದು ಕರೆಯಲಾಗಿದೆ.

ಸ್ವರೂಪಭೂತವಾದ ಮೋದರೂಪ ಸುಖಕ್ಕೆ ಆಶ್ರಯನಾಗಿರುವದರಿಂದ ನಾರಾಯಣನ ದಕ್ಷಿಣ ಬಾಹುವು ಮೋದವೆಂದು ಹಾಗು ಸ್ವರೂಪಭೂತವಾದ ಪ್ರಕೃಷ್ಟಸುಖಕ್ಕೆ ಆಶ್ರಯವಾಗಿರುವದರಿಂದ ಇವನ ವಾಮನಬಾಹುವು ಪ್ರಮೋದವೆಂದು ಕರೆಯಲ್ಪಟ್ಟಿವೆ. ನಾರಾಯಣನ ಮಧ್ಯದೇಹವು ಸ್ವರೂಪಾನಂದದಿಂದ ಕೂಡಿರುವದರಿಂದ ಆನಂದ ನಾಮಕವಾಗಿದೆ. ಅವನ ಪಾದದ್ವಯಗಳು ಪೃಥಿವ್ಯಾದಿಮೋದಗಳನ್ನು ಸೃಷ್ಟಿಸಿ ಅವುಗಳಿಗೆ ವೃದ್ಧಿಯನ್ನು ಉಂಟು ಮಾಡಿರುವದರಿಂದ ಬ್ರಹ್ಮ ಎಂಬ ಹೆಸರನ್ನು ಪಡೆದು ಕೊಂಡಿವೆ.

ಈ ಮೊದಲಿನ ಐದು ಪ್ರಕರಣಗಳಲ್ಲಿ ಪ್ರತಿಪಾದಿತನಾದ ಅನ್ನಮಯಾದಿಬ್ರಹ್ಮನು ಜೀವಭಿನ್ನನಾಗಿರುವನು. ಇದನ್ನೇ ಮುಂದಿನ ಶ್ಲೋಕವು ಹೀಗೆ ವಿವರಿಸುತ್ತದೆ.

ಬ್ರಹ್ಮನು ಜೀವಭಿನ್ನನಾಗಿಲ್ಲವೆಂದು ತಿಳಿದವನು ದುಃಖಿಯೇ ಆಗುವನು. ಬ್ರಹ್ಮನು ಜೀವಭಿನ್ನನಾಗಿದ್ದಾನೆ ಎಂದು ತಿಳಿದವನು ಮುಕ್ತಿಯೋಗ್ಯನೆನಿಸುತ್ತಾನೆ.

ಬ್ರಹ್ಮನನ್ನು ಕುರಿತು ವರುಣ ಕೇಳಿದ ಪ್ರಶ್ನೆಗಳು ಈ ಕೆಳಗಿನಂತೆ ಉಪನಿಷತ್ತಿನಲ್ಲಿ ಉಕ್ತವಾಗಿವೆ. ಬ್ರಹ್ಮನನ್ನು ಹೊಂದುವವರು ಯಾರು ? ಯಾರಾದರೂ ಬ್ರಹ್ಮನನ್ನು ಹೊಂದುತ್ತಾರೋ ಅಥವಾ ಜ್ಞಾನಿಗಳು ಮಾತ್ರವೋ ? ಜ್ಞಾನಿಗಳಷ್ಟೇ ಬ್ರಹ್ಮನನ್ನು ಹೊಂದುತ್ತಾರೆ ಎನ್ನುವ ಪಕ್ಷದಲ್ಲಿಯೂ ಎಲ್ಲ ಜ್ಞಾನಿಗಳೂ ಬ್ರಹ್ಮನನ್ನು ಹೊಂದುತ್ತಾರೋ ಅಥವಾ ಕೆಲವರು ಮಾತ್ರವೋ ? ಎಲ್ಲರೂ ಬ್ರಹ್ಮನನ್ನು ಹೊಂದುತ್ತಾರೆ ಎನ್ನುವ ಪಕ್ಷದಲ್ಲಿಯೂ ಕೆಲವರು ಸಮೀಚೀನವಾಗಿ ಮತ್ತೆ ಕೆಲವರು ಅಸಮೀಚೀನವಾಗಿ ಬ್ರಹ್ಮನನ್ನು ಹೊಂದುವರು ಎನ್ನುವ ಈ ಮೂರು ಪ್ರಶ್ನೆಗಳಿಗೆ ಬ್ರಹ್ಮದೇವರು ಹೀಗೆ ಉತ್ತರವನ್ನು ನೀಡುತ್ತಾರೆ.

ಅಜ್ಞಾನಿಗಳು ಬ್ರಹ್ಮನನ್ನು ಸರ್ವಥಾ ಹೊಂದಲಾರರು. ಜ್ಞಾನಿಗಳೆಲ್ಲರೂ ಬ್ರಹ್ಮನನ್ನು ಹೊಂದುವರು ಎನ್ನುವ ಮಾತು ಸತ್ಯವಾದರೂ ಮತ್ತೆ ಅದರಲ್ಲಿಯೂ ವಿರಂಚಿಯೊಬ್ಬನೇ ಸರ್ವದಾ ಸಮೀಚೀನವಾಗಿ ಬ್ರಹ್ಮನನ್ನು ಹೊಂದುತ್ತಾನೆ. ಮುಕ್ತರ ಸುಖದಲ್ಲಿ ವೈವಿಧ್ಯತೆ ಇರುವದರಿಂದ ಇತರರು ತಾರತಮ್ಯದಿಂದ ಬ್ರಹ್ಮನನ್ನು ತಿಳಿಯುತ್ತಾರೆ.

ಅಜ್ಞಾನಿಯು ಭಗವಂತನನ್ನು ಹೊಂದುವದಿಲ್ಲ. ಜ್ಞಾನಿಯಾದವನೇ ಭಗವಂತನನ್ನು ಹೊಂದುತ್ತಾನೆ ಎನ್ನುವದನ್ನು ತಿಳಿಸಿ ಜ್ಞಾನಿಯು ತಿಳಿದ ಭಗವಂತನ ಮಹಿಮೆಯನ್ನು ತಿಳಿಸುವದಕ್ಕಾಗಿಯೇ ಜಗತ್ತಿನ ಸೃಷ್ಟಿಯ ವ್ಯಾಪಾರವನ್ನು ನಿರೂಪಿಸುತ್ತಿದ್ದಾರೆ.

ಭಗವಂತ ಮೊದಲು ಜಗತ್ತನ್ನು ಸೃಷ್ಟಿಸಿದ.ಆ ಜಗತ್ತಿಗೆ ನಿಯಾಮಕವಾಗುವಂತೆ ಬಹುರೂಪಗಳನ್ನು ಹೊಂದುವೆನು ಎಂದು ಇಚ್ಛಿಸಿದ.ಹಾಗೆಯೇ ಯೋಚನೆಯನ್ನು ಮಾಡಿದ. ಹೀಗೆ ಯೋಚಿಸಿ ಮೊದಲು ತನ್ನ ಉದರದಲ್ಲಿದ್ದ ಎಲ್ಲ ಜಗತ್ತನ್ನು ಸೃಷ್ಟಿಗೊಳಿಸಿದ.ಜಗತ್ತನ್ನು ಸೃಷ್ಟಿಸಿ ಅದನ್ನು ಪ್ರವೇಶಿಸಿದ. ಭಗವಂತನು ಸನ್ನಾಮಕವಾದ ಜಗತ್ತಿನಲ್ಲಿ ಅಂತರ್ಗತನಾಗಿ ಎಲ್ಲೆಡೆ ವ್ಯಾಪಿಸಿದ. ತ್ಯತ್ ಶಬ್ದವಾಚ್ಯನಾದ ಪರಮಾತ್ಮ ತ್ಯತ್ ಎಂಬ ಹೆಸರಿನ ಚತುರ್ಮುಖನಲ್ಲಿ ಅಂತರ್ಗತನಾದನು.

ಸೃಷ್ಟಿಮಾಡುವದಕ್ಕೆ ಮೊದಲು ಪರಮಾತ್ಮ ವಿಚಾರಮಾಡಿದ.ಯಾವುದೇ ಕೆಲಸಮಾಡಬೇಕಾದರೆ ಆಲೋಚನೆ ಇದು ಆವಶ್ಯಕ.ಇದನ್ನು ತಿಳಿಸುವದೇ ಆಲೋಚನೆಯ ಉದ್ದೇಶ.

ತ್ಯತ್ ಅನಿರುಕ್ತ ವಿಜ್ಞಾನ ನಿಲಯನ ಶಬ್ದಗಳು ಮಹತ್ತತ್ವಾಭಿಮಾನಿಯಾದ ಬ್ರಹ್ಮನನ್ನು ಹೇಳುವವು. ಸತ್ಯಶಬ್ದವು ಮುಖ್ಯಪ್ರಾಣನನ್ನು ಶ್ರೀದೇವಿಯನ್ನು ಹೇಳುವದು. ಸತ್ ನಿರುಕ್ತ ಅನೃತ ಅವಿಜ್ಞಾನ ಮತ್ತು ಅನಿಲಯನಶಬ್ದಗಳು ಪ್ರಕೃತಿ ಪ್ರಾಣ ಮತ್ತು ಮಹತತ್ತ್ವಾಭಿಮಾನಿಯಾದ ಬ್ರಹ್ಮ ಇವರಿಂದ ಭಿನ್ನವಾದ ಜಗತ್ತನ್ನು ಹೇಳುತ್ತದೆ. ಈ ಎಲ್ಲ ಶಬ್ದಗಳ ಪ್ರವೃತ್ತಿನಿಮಿತ್ತಗಳಿಗೆ ಸ್ವತಂತ್ರವಾಗಿ ಕಾರಣನಾಗಿರುವದರಿಂದ ಆ ಶಬ್ದಗಳಿಂದ ಮುಖ್ಯವಾಚ್ಯನಾಗಿದ್ದಾನೆ.

ಭಗವಂತ ಬಹುರೂಪಗಳ ಚಿಂತನೆಯನ್ನು ಇಲ್ಲಿ ನಿರೂಪಿಸಲಾಗಿದೆ. ಅಸನ್ನಾಮಕನಾದ ನಾರಾಯಣನಿಂದ ಸನ್ನಾಮಕವಾಸುದೇವನು ಪ್ರಾದುರ್ಭವಿಸಿದನು. ಆ ವಾಸುದೇವನು ತನ್ನನ್ನು ತಾನೇ ಸಂಕರ್ಷಣಾದಿರೂಪಿಯನ್ನಾಗಿ ಪ್ರಕಟಗೊಳಿಸಿದನು. ಅನ್ನುವದಕ್ಕಾಗಿಯೇ ಅವನಿಗೆ 'ಸುಕೃತ್' ಎಂಬ ಹೆಸರು ಬಂದಿತು. ಸುಕೃತನಾಮಕನಾದ ವಾಸುದೇವನು ಆನಂದರೂಪಿಯು. ಇವನ ಅನುಗ್ರಹದಿಂದಲೇ ಜ್ಞಾನಿಯು ಆನಂದವನ್ನು ಹೊಂದುತ್ತಾನೆ.

ಭಗವಂತ ಆನಂದಮಯನಾಗದೇ ಇದ್ದರೆ ಈ ಜಗತ್ತನ್ನು ಕ್ರಿಯಾಶೀಲವಾಗುವಂತೆ ಮಾಡಿರಲಾರನು. ಅವನು ಈ ಜಗತ್ತನ್ನು ಪ್ರವರ್ತಿಸದೇ ಇದ್ದಲ್ಲಿ ಇನ್ನಾರು ಈ ಜಗತ್ತನ್ನು ಪ್ರವರ್ತಿಸಲು ಸಮರ್ಥರು. ಈ ಜಗತ್ತನ್ನು ಪ್ರವರ್ತಿಸುತ್ತಾ ಈ ಜಗತ್ತಿಗೆ ಆನಂದವನ್ನು ನೀಡಿದ್ದಾನೆ. ಆದ್ದರಿಂದ ಅವನು ಪೂರ್ಣಾನಂದಸ್ವರೂಪನು.

**... ಭಗವಂತ ಪೂರ್ಣಾನಂದ ...**

ಲೋಕದಲ್ಲಿ ಚೇತನಪ್ರವೃತ್ತಿಗಳು ನಾಲ್ಕು ವಿಧವಾಗಿ ಕಂಡಿವೆ. ದುಃಖೋದ್ರೇಕದಿಂದ, ಸುಖದ ಅಭಿಲಾಷೆಯಿಂದ, ದುಃಖದಲ್ಲಿ ದ್ವೇಷದಿಂದ, ಮತ್ತು ಕೇವಲ ಸುಖೋದ್ರೇಕದಿಂದ. ಇಲ್ಲಿ ಹೇಳಿದ ಮೊದಲ ಮೂರು ಪ್ರವೃತ್ತಿಗಳು ಸರ್ವಶಕ್ತನಾದ ಭಗವಂತನಲ್ಲಿ ಇರಲು ಸಾಧ್ಯವಿಲ್ಲ. ಆದ್ದರಿಂದ ಸುಖೋದ್ರೇಕದಿಂದಲೇ ಪ್ರವರ್ತಿಸುವನು ಎಂದು ಹೇಳಬೇಕು.

## ... ಜ್ಞಾನಿಗಳಿಗೆ ಮೋಕ್ಷದಲ್ಲಾಗುವ ಆನಂದ ...

ಬ್ರಹ್ಮವಲ್ಲಿಯ ಕೊನೆಯಲ್ಲಿ ಮುಕ್ತರ ಆನಂದತಾರತಮ್ಯವನ್ನು ವರ್ಣಿಸಿದ್ದಾರೆ. ಪ್ರತಿಯೊಬ್ಬ ಜ್ಞಾನಿಗೆ ಮೋಕ್ಷ ದೊರೆಯುವದರಲ್ಲಿ ಮಾತೆರಡಿಲ್ಲ, ಸಿಗುವ ಮೋಕ್ಷವೂ ಆನಂದದ ತಾರತಮ್ಯದಿಂದ ಕೂಡಿದೆ. ಮನುಷ್ಯಚಕ್ರವರ್ತಿಯಿಂದ ಆರಂಭವಾಗುವ ತಾರತಮ್ಯವನ್ನು ಉಪನಿಷತ್ತು ಬಹಳ ಹೃದಯಂಗಮವಾಗಿ ನಿರೂಪಿಸಿದೆ. ಅದರ ವಿವರಣೆ ಹೀಗಿದೆ -

ಮನುಷ್ಯಚಕ್ರವರ್ತಿಗಳು ಸಮಗ್ರಭೂಮಂಡಲವನ್ನು ಆಳುವ ದೊರೆಗಳಾಗಿ ವೈಭವದಿಂದ ಜೀವನವನ್ನು ನಡೆಸುತ್ತಾ ಸಕಲ ಆನಂದಗಳನ್ನು ಸಂಸಾರದಲ್ಲಿ ಅನುಭವಿಸುತ್ತಾರೆ. ಇಂತಹ ಆನಂದವು ಮೋಕ್ಷದಲ್ಲಿ ಅವರು ಅನುಭವಿಸುವ ಒಂದು ಆನಂದಕ್ಕೆ ಸಮಾನವಾಗಿರುತ್ತದೆ.

**ವಿಶೇಷ-** ಈ ಪ್ರಸಂಗದಲ್ಲಿ ಇದಕ್ಕೆ ಸಂಬಂಧಿಸಿದಂತೆ ಇನ್ನೊಂದು ವಿಷಯವನ್ನು ನಾವು ಹೀಗೆ ತಿಳಿದು ಕೊಳ್ಳಬಹುದಾಗಿದೆ. ಮನುಷ್ಯಚಕ್ರವರ್ತಿಗಳಿಗಿಂತ ಅಧಮರಾದ ಮನುಷ್ಯೋತ್ತಮರನ್ನೂ ಇಲ್ಲಿ ಸೇರಿಸಿಕೊಳ್ಳಬೇಕು. *'ಅನ್ಯೇಭ್ಯೋಽಪಿ ವಿಮುಕ್ತೇಭ್ಯಃ ಆನಂದಶ್ಚಕ್ರವರ್ತಿನಾಮ್ । ಮುಕ್ತಾನಾಂ ಹಿ ಶತೋದ್ರಿಕ್ತಃ'* ಎಂಬ ಬೃಹದಾರಣ್ಯಕ- ಭಾಷ್ಯೋಕ್ತಪ್ರಮಾಣವು ಮುಕ್ತಿಯಲ್ಲಿ ಮನುಷ್ಯೋತ್ತಮರು ಅನುಭವಿಸುವ ಆನಂದಕ್ಕಿಂತಲೂ ಮನುಷ್ಯ ಚಕ್ರವರ್ತಿಗಳು ಅನುಭವಿಸುವ ಆನಂದ ನೂರರಷ್ಟು ಅಧಿಕ ಎಂದು ಹೇಳುತ್ತದೆ. ಹಾಗಾದರೆ ಮನುಷೋತ್ತಮರಿಗೆ ಮುಕ್ತಿಯಲ್ಲಿ ಆಗುವ ಒಂದು ಆನಂದ ಎಂದರೆ ಅದು ಎಷ್ಟು? ಎನ್ನುವ ಸಂದೇಹಕ್ಕೆ ಹೀಗೆ ಸಮಾಧಾನವನ್ನು ಹೇಳಬಹುದಾಗಿದೆ. ಮನೋಷ್ಯತ್ತಮರಿಗೆ ಸಂಸಾರಾವಸ್ಥೆಯಲ್ಲಿ ಆಗುವ ಅಸಂಖ್ಯಾತ ಆನಂದವು ಅವರಿಗೆ ಮೋಕ್ಷದಲ್ಲಿ ಆಗುವ ಒಂದು ಆನಂದಕ್ಕೆ ಸಮಾನವಾಗಿರುತ್ತದೆ.

